ಶೀ: ಹಿಂದುಸ್ತಾನಿಗರ
ಬುದ್ಧಿಮಾಪನವು

ಲೇ: ವೆಂಕಟರಾವ ವಿಠ್ಠಲ ಕಾಮತ



೧೯೩೬

ಒಕ್ಸ್‌ಫರ್ಡ ಯೂನಿವರ್ಸಿಟಿ ಪ್ರೆಸ್

1936

# ...ಂದಿ ಹುಡುಗರ ಬುದ್ಧಿಮಾಪನವು

ವೆಂಕಟರಾವ ವಿಠ್ಠಲ ಕಾಮತ








ಒಕ್ಸ್ಫರ್ಡ್ ಯೂನಿವರ್ಸಿಟಿ ಪ್ರೆಸ್

ಬೆಲೆ. ರೂ. ೧/

# ಹಿಂದಿ ಹುಡುಗರ ಬುದ್ಧಿಮಾಪನವು

ಲೇಖಕರು :

**ವೆಂಕಟರಾವ ವಿಠ್ಠಲ ಕಾಮತ**

ಲೆಕ್ಚರರ್ ಸೆಕಂಡರಿ ಟ್ರೇನಿಂಗ್ ಕಾಲೇಜ್

ಮುಂಬಯಿ




ಒಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್

ಮುಂಬಯಿ ಕಲಕತ್ತಾ ಮದ್ರಾಸ್

೧೯೩೬

# ಪ್ರಸ್ತಾವನೆ

ಮಾನಸ ಶಾಸ್ತ್ರಾನುರೋಧದಿಂದ ಬುದ್ಧಿಪರೀಕ್ಷೆಯನ್ನು ಮಾಡುವದು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಳೆದ ೨೫–೩೦ ವರ್ಷಗಳ ತನಕ ನಡೆದಿದ್ದರೂ ನಮ್ಮ ಹಿಂದುಸ್ಥಾನದಲ್ಲಿ ಈ ವಿಷಯುವು ತೀರ ಹೊಸದು. ಈ ಮೊದಲು ಹಿಂದುಸ್ಥಾನದಲ್ಲಿ ಬುದ್ಧಿಪರೀಕ್ಷೆಯ ಪ್ರಯತ್ನವು ದೊಡ್ಡ ಪ್ರಮಾಣದಲ್ಲಿ ಎಲ್ಲಿಯೂ ಮತ್ತು ಯಾವ ಭಾಷೆಯಲ್ಲಿಯೂ ನಡೆದಿಲ್ಲ. ಪಂಜಾಬದಲ್ಲಿ ಮಾತ್ರ ರಾಯಿಸ ಸಾಹೇಬರು ಹಿಂದುಸ್ತಾನೀ ಭಾಷೆಯಲ್ಲಿ ಬುದ್ಧಿಪರೀಕ್ಷೆಯನ್ನು ಮಾಡಿದ್ದಾರೆ. ಆದರೆ ಅವರ ಪ್ರಶ್ನೆಗಳ ರಚನೆಯು ಬೀನೇನ ಪದ್ಧತಿಯ ಪ್ರಕಾರ ಮಾಡದೆ ಇದ್ದದರಿಂದ ಆ ಸ್ಕೇಲು ಅಷ್ಟು ವ್ಯಾಪಕ ಆಗಿಲ್ಲ.

ಪ್ರಸ್ತುತ ಪ್ರಶ್ನೆಗಳ ಸ್ಕೇಲನ್ನು ಸಿದ್ಧಮಾಡುವದಕ್ಕಿಂತ ಮುಂಚೆ ೧,೦೭೪ ಜನ ಹುಡುಗ ಹುಡುಗಿಯರ ಪರೀಕ್ಷೆಯನ್ನು ತೆಗೆದುಕೊಳ್ಳಲಾಗಿದೆ. ಈ ಹುಡುಗ ಹುಡುಗಿಯರು ಎರಡು ವರ್ಷಗಳಿಂದ ತೀರ ಪ್ರೌಢ ವಯಸ್ಸಿನ ತನಕ ಎಲ್ಲ ವಯಸ್ಸಿನವರೂ ಇದ್ದರು. ಈ ಬಹಳ ಆಯಾಸದ ಕೆಲಸವನ್ನು ಕೈಕೊಂಡು ಈ ಸ್ಥಿತಿಗೆ ತರಲಿಕ್ಕೆ ಪ್ರಸ್ತುತ ಲೇಖಕನ ಯುರೋಪದೊಳಗಿನ ಗುರುವರ್ಯರಾದ ಪ್ರೊಫೇಸರ್ ಗೊಡ್‌ಫ್ರೇ ಟಾಮುಸನ್ ಇವರು ಆಗಿಂದಾಗ್ಗೆ ಉತ್ಸಾಹವನ್ನು ಕೊಟ್ಟುದೇ ಎಲ್ಲ ರೀತಿಯಿಂದ ಕಾರಣವಾಗಿದ್ದರಿಂದ ಈ ಪುಸ್ತಕದ ಶ್ರೇಯಸ್ಸು ಎಷ್ಟೋ ಪ್ರಮಾಣದಿಂದ ಅವರಿಗೇ ಸಲ್ಲುತ್ತದೆ.

ವಸ್ತುತಃ ಈ ಕಾರ್ಯವು ಈ ಮೊದಲೇ ಮಾನಸಶಾಸ್ತ್ರದೃಷ್ಟಿಯಿಂದ ಸಂಪೂರ್ಣ ಚರ್ಚೆಯೊಡನೆ ಇಂಗ್ರಜೀ ಭಾಷೆಯಲ್ಲಿ ಪುಸ್ತಕ ರೂಪದಿಂದ ಸಿದ್ಧವಾಗಿದ್ದರೂ ಕೆಲವು ಕಾರಣಗಳ ಮೂಲಕ ಆ ಪುಸ್ತಕವನ್ನು ಮುದ್ರಿಸಲಿಕ್ಕೆ ಅನನುಕೂಲತೆಯಾಗಿದ್ದರಿಂದ ಅದನ್ನೇ ಸಂಕ್ಷಿಪ್ತ ರೂಪದಲ್ಲಿ ಈಗ ಪ್ರಕಟಿಸಿರುತ್ತೇವೆ. ಆದರೂ ಈ ವಿಷಯಕ್ಕೆ ಸಂಬಂಧಿಸಿದ ಚರ್ಚೆಯ ರೂಪವನ್ನು ಸಂಕ್ಷೇಪದಲ್ಲಿ ನೋಡಬೇಕಾಗಿದ್ದರೆ ಓದುಗರು ಒಕ್ಸ್‌ಫರ್ಡ್

ಯೂನಿವರ್ಸಿಟಿ ಪ್ರೆಸ್ಸಿನವರು ಹೊರಡಿಸುವಂಥ "ಟೀಚಿಂಗ್" ಎಂಬ ಇಂಗ್ರಜೀ ತ್ರೈಮಾಸಿಕ ಪುಸ್ತಕದೊಳಗಿನ ಮಾರ್ಚ, ಸೆಪ್ಟೆಂಬರ್ ಮತ್ತು ಡಿಸೆಂಬರ್ ೧೯೩೪ ಮತ್ತು ಮಾರ್ಚ ೧೯೩೬ ಈ ತಿಂಗಳುಗಳ ಸಂಚಿಕೆಗಳೊಳಗಿನ ಪ್ರಸ್ತುತ ಲೇಖಕನ ಲೇಖಗಳನ್ನು ಓದಬಹುದು.

ಈ ಕೆಲಸವನ್ನು ಪೂರ್ಣಮಾಡಲಿಕ್ಕೆ ಲೇಖಕನಿಗೆ ಎಷ್ಟೋ ಮಿತ್ರರ ಬಹುಮೂಲ್ಯವಾದ ಸಹಾಯವು ಆಗಿದೆ; ಅದನ್ನೆಲ್ಲ ಇಲ್ಲಿ ವಿವರಿಸುವದು ಅಶಕ್ಯವಾದ ಮಾತು. ಅದನ್ನು ಮುಂದೆ ಲೇಖಕನು ತನ್ನ ಇಂಗ್ರಜೀ ಪುಸ್ತಕದಲ್ಲಿ ಸ್ವಲ್ಪ ಮಟ್ಟಿಗೆ ತೋರಿಸಬೇಕೆಂದಿರುವನು. ಆದರೆ ಇಲ್ಲಿ ಒಬ್ಬವರ ಸಹಾಯವನ್ನು ನೆನಿಸುವದು ಅಗತ್ಯವಾಗಿದೆ. ಅದು ಯಾರದೆಂದರೆ—ಲೇಖಕನ ಪರಮ ಮಿತ್ರರಾದ ಮ|| ರಾ|| ಎಂ. ಪಿ. ಪೂಜಾರ, ಕನ್ನಡ ಪಂಡಿತ, ಟ್ರೇನಿಂಗ್ ಕಾಲೇಜ್ ಫೊರ್ ಮೆನ್, ಧಾರವಾಡ, ಇವರು ಲೇಖಕನಿಗೆ ಮೊದಲಿನಿಂದ ಪ್ರಶ್ನೆಗಳನ್ನು ಕನ್ನಡಿಸುವದರಲ್ಲಿಯೂ ಮುಂದೆ ಅವುಗಳ ಪ್ರೂಫುಗಳನ್ನು ತಿದ್ದುವದರಲ್ಲಿಯೂ ಮಾಡಿದ ಸಹಾಯವನ್ನು ನೆನಿಸಿದಷ್ಟು ಕಡಿಮೆಯೇ ಆಗಿರುತ್ತದೆ.

ಹಾಗೂ ಮುಂಬಯಿ ಯೂನಿವರ್ಸಿಟಿಯವರು ಕೆಲಮಟ್ಟಿಗೆ ಗ್ರಾಂಟನ್ನು ಕೊಟ್ಟು ಈ ಸಂಶೋಧನ ಕಾರ್ಯಕ್ಕೆ ಸಹಾಯಮಾಡಿದ್ದರಿಂದ ಲೇಖಕನು ಅವರ ಋಣಿಯಾಗಿರುತ್ತಾನೆ.

ಈ ಪುಸ್ತಕದ ಸಂಗಡ ಪ್ರಕಟಿಸಿರುವ ಸಾಮುಗ್ರಿಗಳ ಪೈಕಿ ನಾಲ್ಕು ಚಿತ್ರಗಳನ್ನು "ಮನೋರಂಜನ" ಎಂಬ ಮುಂಬಯಿಯೊಳಗಿನ ಮಾಸಿಕದೊಳಗಿಂದ ಆ ಮಾಸಿಕದ ಪ್ರೊಪ್ರಾಯಟರರ ಅಪ್ಪಣೆಯಿಂದ ತಕ್ಕೊಂಡಿರುತ್ತೇವೆ.

ಸೇಕಂಡರಿ ಟ್ರೇನಿಂಗ್ ಕಾಲೇಜ್
ಮುಂಬಯಿ
೧ ನೇ ಜುಲೈ ೧೯೩೬

**ವೆಂ. ವಿ. ಕಾಮತ**

# ಅನುಕ್ರಮಣಿಕೆ

## ಪರೀಕ್ಷೆ ತೆಗೆದುಕೊಳ್ಳುವದಕ್ಕೆ ಸಾಮಾನ್ಯ ಸೂಚನೆಗಳು

**ಪರೀಕ್ಷೆಯ ಸ್ಥಳ.**—ಮಾರ್ಗದೊಳಗಿನ ಗದ್ದಲದಿಂದ ಇಲ್ಲವೆ ಜನರ ಕಲಕಲದಿಂದ ಹುಡುಗರ ಮನಸ್ಸು ಏಕಾಗ್ರವಾಗದಂಥ ಸ್ಥಳವು ಮಾನಸ ಶಾಸ್ತ್ರಪರೀಕ್ಷಣಕ್ಕೆ ತಕ್ಕದ್ದಲ್ಲ. ದೊಡ್ಡ ಪಟ್ಟಣಗಳಲ್ಲಿ ಅಂತಹ ಸ್ಥಳವು ಅಪರೂಪ. ಆದರೂ ಮಾರ್ಗಗಳನ್ನು ಬಿಟ್ಟು ಸ್ವಲ್ಪದೂರದಲ್ಲಿರುವ ಶಾಂತ ಸ್ಥಳವನ್ನು ಉಪಯೋಗಿಸಿಕೊಳ್ಳಬಹುದು. ಹುಡುಗರ ಮನಸ್ಸು ಒಮ್ಮೆ ಕೆಲಸದಲ್ಲಿ ತೊಡಗಿತೆಂದರೆ ಸಣ್ಣ ಪುಟ್ಟ ಗೊಂದಲದಿಂದ ಅವರಿಗೆ ತೊಂದರೆ ಯಾಗಲಾರದು. ಪರೀಕ್ಷಣವು ಆರಂಭವಾದ ಬಳಿಕ ಉಳಿದ ಹುಡುಗರೂ ನೌಕರ ಜನರೂ ಆ ಕಡೆಗೆ ನೋಡದಂತೆ ಇಲ್ಲವೆ ಕಿಡಕಿಗಳಲ್ಲಿ ಇಣಿಕಿ ನೋಡದಂತೆ ಮಾಡಬೇಕು. ಮೇಜು ಕುರ್ಚಿಗಳನ್ನೆಳೆದಾಡುವದು ಇಲ್ಲವೆ ಬಾಗಿಲು ಕಿಡಕಿಗಳನ್ನು ತೆರೆಯುವದು, ಮುಚ್ಚುವದು ಮುಂತಾದದ್ದು ಆಗದಂತೆ ನೋಡಿಕೊಳ್ಳಬೇಕು. ಏಕೆಂದರೆ, ಹುಡುಗರ ಮನಸ್ಸು ವ್ಯಗ್ರ ವಾಗಿರುವದಕ್ಕೆ ಇವೇ ಮುಖ್ಯ ಕಾರಣಗಳು. ಕೋಣೆ ಬಹಳ ದೊಡ್ಡದಿರ ಬಾರದು. ದೊಡ್ಡ ಕೋಣೆಯ ಒಂದು ಭಾಗವನ್ನು ಉಪಯೋಗಿಸಿ ಕೊಳ್ಳುವಧಾದರೆ ನಡುವೆ ಉರುಟು ಅರಿವೆಯ ತೆರೆಯನ್ನು ಇಳಿಯಬಿಡ ಬೇಕು. ಪರೀಕ್ಷಣವು ನಡೆದಾಗ ಕೋಣೆಯ ಉಳಿದ ಭಾಗದಲ್ಲಿ ಇನ್ನಾವ ಗೊಂದಲವೂ ನಡೆಯದಂತೆ ಮಾಡಬೇಕು. ಕೋಣೆಯಲ್ಲಿ ಸಾಮಾನು ಮುಂತಾದದ್ದು ಸಾಧ್ಯವಿದ್ದಮಟ್ಟಿಗೆ ಕಡಿಮೆ ಇರಬೇಕು. ಎರಡು ಮೂರು ಕುರ್ಚಿಗಳು ಇಲ್ಲವೆ ಸ್ಟೂಲುಗಳು ಅಥವಾ ದೊಡ್ಡದೊಂದು ಮೇಜು ಇಷ್ಟೇ ಸಾಕು. ಮೇಜಿನ ಮೇಲೆ ಇಟ್ಟ ಚಿತ್ರ, ಕಾಗದ ಇಲ್ಲವೆ ಆಕೃತಿ—ಇವೆಲ್ಲ ಹುಡುಗರಿಗೆ ತೊಂದರೆ ಇಲ್ಲದೆ ಕಾಣು ವಷ್ಟು ಎತ್ತರವಾದ ಕುರ್ಚಿಯನ್ನಾಗಲಿ, ಸ್ಟೂಲನ್ನಾಗಲಿ ಹುಡುಗನಿಗೆ ಕೂಡ್ರಲಿಕ್ಕೆ ಕೊಡಬೇಕು. ದೊಡ್ಡವರು ಕೂಡ್ರುವ ಕುರ್ಚಿಯನ್ನು ಸಣ್ಣ ಹುಡುಗರಿಗೆ ಕೊಟ್ಟರೆ ಮೇಜು ಅವರಿಗೆ ಬಹಳ ಎತ್ತರವಾಗು ವದು. ಪರೀಕ್ಷೆಯ ಎಲ್ಲ ಉಪಕರಣಗಳನ್ನು ಹುಡುಗರ ಮುಂದೆ

ಮೇಜಿನ ಮೇಲೆ ಹರಡಿರಬಾರದು. ಅವುಗಳನ್ನು ಬದಿಗೆ ಇಟ್ಟಿರಬೇಕು. ಬೇಕಾದಂತೆ ಒಂದೊಂದನ್ನೇ ಇದಿರಿಗೆ ತರಬೇಕು. ಬಹಳ ಹುಡುಗರ ಪರೀಕ್ಷೆ ತೆಗೆದುಕೊಳ್ಳುವದಿರುವಾಗ ಒಂದರ ತರುವಾಯ ಒಂದು ಪರೀಕ್ಷೆ ನಡೆಯುವದಿದ್ದರೆ ಆಗ ಮಾತ್ರ ಎಲ್ಲ ಉಪಕರಣಗಳನ್ನು ಈ ಕೆಲಸಕ್ಕಾಗಿಯೇ ಮಾಡಿಸಿದ ಒಂದು ಸಣ್ಣ ಕಪಾಟಿನ ಸಣ್ಣ ಸಣ್ಣ ಖಾನೆಗಳಲ್ಲಿ ನಂಬರಿನಂತೆ ಇಟ್ಟರೆ ಬಹಳ ಅನುಕೂಲವಾಗುವದು ; ಮತ್ತು ವೇಳೆಯೂ ಉಳಿಯುವದು. ಈ ಕಪಾಟನ್ನು ಹುಡುಗನ ಹತ್ತಿರ ಒಂದು ಮೇಜಿನ ಮೇಲೆ ಅವನ ಇದಿರಿಗೆ ಬೆನ್ನಾಗುವಂತೆ ಇಟ್ಟಿರಬೇಕು. ಹುಡುಗನೂ ಪರೀಕ್ಷಕನೂ ಒಂದೇ ಮೇಜಿನ ಹತ್ತಿರ ಇದಿರುಬದಿರು ಕುಳ್ಳಿರಬೇಕು. ಸಾಧ್ಯವಾದ ಮಟ್ಟಿಗೂ ಮೇಜಿನ ಮೇಲೆ ಸಾಮಾನುಗಳನ್ನು ಇಡಬಾರದು. ಸಹಾಯಕನು ಇರದಿದ್ದರೆ ಪರೀಕ್ಷಕನು ಹುಡುಗನ ಉತ್ತರಗಳನ್ನು ತಾನೇ ಬರೆದಿಟ್ಟುಕೊಳ್ಳಬೇಕು. ಆದರೆ ಪರೀಕ್ಷಕನು ಬರೆದಿಟ್ಟುಕೊಂಡುದನ್ನು ಓದುವ ಇಚ್ಛೆಯು ಹುಡುಗನಿಗೆ ಉಂಟಾಗದಂತೆ ನೋಡಿಕೊಳ್ಳಬೇಕು. ಇದಕ್ಕಾಗಿ ಒಂದು ಸ್ಲೋಪಿನ ಮೇಜು ಇಲ್ಲವೆ ಖಾನೆ ಇರುವ ಕಡಿಮೆ ಎತ್ತರದ ಬೇರೆ ಮೇಜು ಇದ್ದರೆ ಒಳ್ಳೆಯದು. ಹುಡುಗರ ಲಕ್ಷವನ್ನು ಎಳೆದುಕೊಳ್ಳುವಂಥ ಚಿತ್ರಗಳು, ಡ್ರಾಯಿಂಗುಗಳು ಇಲ್ಲವೆ ಗೊಂಬೆಗಳು—ಇವುಗಳನ್ನು ಗೋಡೆಯ ಮೇಲೆ ಇರಗೊಡಬಾರದು. ಪರೀಕ್ಷಕ, ಸಹಾಯಕ, ಪರೀಕ್ಷಿಸಲ್ಪಡುವ ಹುಡುಗ—ಇವರ ಹೊರತು ಬೇರೆ ಜನರು ಆ ಕೋಣೆಯಲ್ಲಿ ಇರಕೂಡದು. ಉಳಿದವರು, ವಿಶೇಷವಾಗಿ ಹುಡುಗನ ತಾಯಿತಂದೆಗಳು, ಶಿಕ್ಷಕನು ಇಲ್ಲವೆ ಹುಡುಗನ ಹಿತಚಿಂತಕರು, ಅಲ್ಲಿ ಇದ್ದರೆ ಅವರು ಹುಡುಗನಿಗೆ ಸಹಾಯಮಾಡುವದಕ್ಕೆ ಉತ್ಸುಕರಾಗುವರು. ಅದರಿಂದ ಕೆಲಸಕ್ಕೆ ಅಡ್ಡಿಯಾಗುವದು. ಮಾನಸ ಶಾಸ್ತ್ರ ಪರೀಕ್ಷಣದ ಕಲ್ಪನೆಯು ಅವರಿಗೆ ಏನೂ ಇರುವದಿಲ್ಲ. ತಮ್ಮ ಹುಡುಗರು ಬುದ್ಧಿವಂತರಿದ್ದಾರೆಂದು ತೋರಿಸಲಿಕ್ಕೆ ಅವರು 'ಹುಡುಗನಿಗೆ ಪ್ರಶ್ನೆ ತಿಳಿಯುತ್ತದೆ' ಎಂದೆನ್ನಬಹುದು; ಇಲ್ಲವೆ ಆ ಪ್ರಶ್ನೆಯನ್ನೇ ಬೇರೆ ರೀತಿಯಿಂದ ತಾವು ಕೇಳತೊಡಗುವರು ; ಇಲ್ಲವೆ ಉದಾಹರಣೆಗಳನ್ನು ಕೊಡತೊಡಗುವರು. ಕೆಲವು ಸಾರಿ ಹುಡುಗರು ಹೇಳುವದಕ್ಕಿಂತ ಮುಂಚೆಯೇ ತಾವು ಉತ್ತರವನ್ನು ಹೇಳಿ ಇದು ನಿನಗೆ ಗೊತ್ತಿಲ್ಲವೇ ಎಂದೆನ್ನುವರು. ಅವರು

ಒಂದು ವೇಳೆ ಈ ಮೇರೆಗೆ ಅಡ್ಡಿಮಾಡುವದಿಲ್ಲವೆಂದು ಕಲ್ಪಿಸಿದರೂ ಪರೀಕ್ಷ್ಯನಾದ ಹುಡುಗನು (ಪರೀಕ್ಷಿಸಲ್ಪಡುವ ಹುಡುಗನು) ಅಂಜಿ ಇಲ್ಲವೆ ಹಟಹಿಡಿದು ಸುಮ್ಮನೆ ಕೂಡ್ರುವ ಸಂಭವವಿರುವದು.

**ಪರೀಕ್ಷಕನೂ ಅವನ ವರ್ತನವೂ.**—ಪರೀಕ್ಷೆಯಲ್ಲಿ ಸ್ಥಳಕ್ಕಿಂತ ಹೆಚ್ಚಿನ ಸಂಗತಿಯೆಂದರೆ—ಪರೀಕ್ಷಕನ ವರ್ತನವು. ಪರೀಕ್ಷಕನು ಬಹಳ ಚತುರನಾಗಿರಬೇಕು. ಏಕೆಂದರೆ, ಬೇರೆ ಬೇರೆ ಸ್ವಭಾವದ ಹುಡುಗರ ಸಂಬಂಧವು ಆತನಿಗೆ ಬರುವದು. ಕೆಲವು ಹುಡುಗರು ಬಹಳ ಒಳ್ಳೆಯ ಸ್ವಭಾವದವರು ; ಕೆಲವರು ದುರ್ಮುಖರು ; ಕೆಲವರು ವಿಧೇಯರೂ ಮನ ವೊಲಿಸಿಕೊಳ್ಳುವವರೂ ; ಕೆಲವರು ಹಟಮಾರಿಗುಣವುಳ್ಳವರು ; ಕೆಲವರು ಉತ್ತರಕೊಡಲು ಉತ್ಸುಕರಾದವರು ; ಇನ್ನು ಕೆಲವರು ಮುಖಹೀನರು. ಆದುದರಿಂದಲೇ ಪರೀಕ್ಷಕನು ಬಹಳ ಶಾಂತವೃತ್ತಿಯವನಾಗಿರಬೇಕು. ಮತ್ತು ಯಾವ ಪ್ರಸಂಗದಲ್ಲಿಯೂ ಸಿಟ್ಟಾಗಬಾರದು. ಅವನು ಬಹಳ ಬುದ್ಧಿವಂತನೂ ಚತುರನೂ ಇರಬೇಕು. ಏಕೆಂದರೆ, ಹುಡುಗರು ಕೇಳಿದ ಯಾವ ಪ್ರಶ್ನೆಗಾದರೂ ಆತನಿಗೆ ಉತ್ತರಕೊಡಲಿಕ್ಕೆ ಬರಬೇಕು. ಅವನು ಹುಡುಗರ ಸಂಗಡ ಗೆಳೆಯನಂತೆ ನಡೆಯುತ್ತ, ಹುಡುಗರ ನಂಬುಗೆಯು ತನ್ನ ಮೇಲೆ ಕೂಡ್ರುವಂತೆ ಮಾಡತಕ್ಕದ್ದು. ಯಾವಾಗಲೂ ನಗುಮೊಗದಿಂದ ಇರುವದೂ ನಿಷ್ಕಪಟವಾಗಿ ಇರುವದೂ ಇವುಗಳಿಂದ ಪರೀಕ್ಷಕನಿಗೆ ಯಾವಾಗಲೂ ಬಹಳ ಉಪಯೋಗವಾಗುವದು. ಈ ಕಲೆಯು ಕೆಲವರಲ್ಲಿ ಹುಟ್ಟಾ ಇರುವದರಿಂದ ಅವರು ಹುಡುಗರ ಗೆಳೆತನವನ್ನು ಬೇಗನೆ ದೊರಕಿಸಿಕೊಳ್ಳುವರು. ಇಂಥ ಮನುಷ್ಯನೇ ಮಾನಸ ಶಾಸ್ತ್ರದ ಪರೀಕ್ಷೆಗೆ ಯೋಗ್ಯನೆಂದು ಹೇಳಲು ಯಾವ ಅಡ್ಡಿಯೂ ಇಲ್ಲ. ಅವನು ಹುಡುಗನ ಸಂಗಡ ಆಟ್ಟೆಮಾಡುತ್ತ ಅವಶ್ಯವೆನಿಸಿದರೆ ಅವನನ್ನು ಅತ್ತಿತ್ತ ತಿರುಗಾಡುವದಕ್ಕೆ ಕರೆದುಕೊಂಡುಹೋಗಿ, ಮೆಲ್ಲಮೆಲ್ಲನೆ ಅವನನ್ನು ಕುರಿತು ಪ್ರೀತಿಯಿಂದ 'ನಿನ್ನ ತಂದೆತಾಯಿಗಳ ಹೆಸರೇನು? ಅಡ್ಡ ಹೆಸರೇನು? ನೀನು ಏನು ಕಲಿಯುವೆ? ನಿನ್ನ ತಂದೆಯು ಯಾವ ಉದ್ಯೋಗಮಾಡುವನು?' ಮೊದಲಾದ ಮಾಹಿತಿಯನ್ನು ಕೇಳಿಕೊಳ್ಳಬೇಕು. ಪೂರ್ಣವಾಗಿ ನಂಬುಗೆ ಉಂಟಾಗುವ ವರೆಗೆ ಇದೇ ಮೇರೆಗೆ ನಡೆಯಬೇಕು. ಬಳಿಕ ತಿಳಿಯಗೊಡದಂತೆ ಪರೀಕ್ಷಣವನ್ನು ಆರಂಭಿಸಬೇಕು.

ಐದು ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗರು ಬಹಳ ಹಟವಾರಿ ಇರುವರು. ಪ್ರಕೃತಿದೇವಿಯು ಅವರಿಗೆ ಸ್ವಾಭಾವಿಕವಾಗಿ ಕೊಟ್ಟ ಆತ್ಮ ಸಂರಕ್ಷಣೋಪಾಯಗಳಲ್ಲಿ ಇದೊಂದು ಉಪಾಯವೆಂದೇ ಹೇಳಬಹುದು. ಇಂಥ ಹುಡುಗರನ್ನು ಒಲಿಸಿಕೊಳ್ಳುವದಕ್ಕೆ ಬಹಳ ವೇಳೆ ಬೇಕಾಗುವದು. ಇವರಿಗಿಂತ ಹಿರಿಯರಾದ ಹುಡುಗರು ಪರೀಕ್ಷೆಗೆ ಸಿದ್ಧರಾಗಿರುವರು. ಆದರೂ ಪರೀಕ್ಷೆಗಿಂತ ಮುಂಚೆ ಅವರ ನಾಚಿಕೆಯ ಇಲ್ಲವೆ ಅಂಜಿಕೆಯ ಸ್ವಭಾವವನ್ನು ಸಂಪೂರ್ಣವಾಗಿ ತೆಗೆದುಹಾಕಬೇಕು. ಪರೀಕ್ಷೆಯು ಬಹಳ ವೇಳೆ ನಡೆದರೆ ಹುಡುಗನು ಬಳಲದಂತೆ ನೋಡಿಕೊಳ್ಳಬೇಕು. ಇದರಲ್ಲಿ ಸಂತೋಷದ ಮಾತು ಯಾವದೆಂದರೆ—ಪರೀಕ್ಷೆಯ ಪ್ರಶ್ನೆಗಳೇ ಹುಡುಗರು ಬೇಸರದೆ ಉತ್ತರಕೊಡುವಂತಹವು ಇರುವವು.

ಬೇರೆ ಬೇರೆ ಮನೋವೃತ್ತಿಯ ಹುಡುಗರ ಕೂಡ ನಡೆದುಕೊಳ್ಳುವ ಕೆಲವು ಮಾತುಗಳನ್ನು ಲಕ್ಷ್ಯದಲ್ಲಿಡಬೇಕಾಗುವದು. ಅಂಜುವ ಇಲ್ಲವೆ ನಾಚುವ ಹುಡುಗರ ಪರೀಕ್ಷೆಯನ್ನು ತೆಗೆದುಕೊಳ್ಳುವದಕ್ಕಿಂತ ಮುಂಚೆ ಅವರ ವಿಶ್ವಾಸವನ್ನು ಉಂಟುಮಾಡಿಕೊಳ್ಳುವದಕ್ಕೆ ಸ್ವಲ್ಪ ವೇಳೆಯನ್ನು ಕಳೆಯತಕ್ಕದ್ದು. ಹುಡುಗರ ಮನಸ್ಸು ಇಲ್ಲದಿದ್ದರೆ, ಅವರು ಸಾಧ್ಯವಾದ ಮಟ್ಟಿಗೂ ಪ್ರಯತ್ನ ಮಾಡಿ ಉತ್ತರ ಕೊಡುವದಕ್ಕೆ ತೊಡಗದಿದ್ದರೆ ಪರೀಕ್ಷೆ ತೆಗೆದುಕೊಳ್ಳುವದು ವ್ಯರ್ಥವಾಗುವದು. ಒಬ್ಬ ಹುಡುಗನು ಹಟವಾರಿ ಇಲ್ಲವೆ ವಕ್ರಸ್ವಭಾವದವನು ಇದ್ದರೆ ಅವನ ಕೂಡ ಸವಿಮಾತುಗಳನ್ನಾಡಿ ಅವನ ಮನೋವೃತ್ತಿಯನ್ನು ಬದಲಿಸಿಕೊಳ್ಳಬೇಕಾಗುವದು. ಒಮ್ಮೆ ಚಿತ್ರಗಳನ್ನು ತೋರಿಸಿ, ಇನ್ನೊಮ್ಮೆ ತಿಂಡಿಯನ್ನು ಕೊಟ್ಟು ಇಲ್ಲವೆ ಹೊರಗೆ ಕರೆದೊಯ್ದು ಯಾವದೊಂದು ಚಮತ್ಕಾರದ ಪದಾರ್ಥವನ್ನು ತೋರಿಸಿ ಅವನ ಮನಸ್ಸಿನಲ್ಲಿ ಜಿಜ್ಞಾಸೆಯನ್ನು ಉಂಟುಮಾಡಬೇಕು. ಮಾನಸಿಕ ವಯಸ್ಸು ಐದು ವರ್ಷಕ್ಕಿಂತ ಕಡಿಮೆ ಇರುವ ಹುಡುಗರ ವಿಷಯದಲ್ಲಿ ಈ ಮೇರೆಗೆ ನಡೆಯುವದು ಅವಶ್ಯವಾಗಿರುವದು.

ಪ್ರಕೃತ ಲೇಖಕನಿಗೆ ಒಮ್ಮೊಮ್ಮೆ ಪರೀಕ್ಷೆ ತೆಗೆದುಕೊಳ್ಳುವ ಮೊದಲು ಒಂದೆರಡು ತಾಸುಗಳನ್ನು ಕೂಡ, ಇಂಥ ಹುಡುಗರ ಕೂಡ, ಕಳೆಯುವ ಪ್ರಸಂಗವು ಬಂದಿರುವದು. ಇಂಥ ಹುಡುಗರ ವಿಷಯದಲ್ಲಿ ತಾಯಿ ಇಲ್ಲವೆ ತಂದೆ ಹಜರ ಇರುವದು ನೆಟ್ಟಗೆ. ಆದರೆ ಪರೀಕ್ಷೆಯ ಪ್ರಶ್ನೆಗಳ

ಸಂಬಂಧದಿಂದ ಅವರು ಒಂದು ಶಬ್ದವನ್ನೂ ಆಡಕೂಡದೆಂದು ಅವರಿಗೆ ಮೊದಲೇ ತಿಳಿಸಿ ಹೇಳಿರಬೇಕು. ಒಮ್ಮೊಮ್ಮೆ ತಾಯಿತಂದೆಗಳು ಸ್ವಲ್ಪ ಸಿಟ್ಟುಮಾಡಿ ಹೇಳಿದರೆ ಕೆಟ್ಟ ಹುಡುಗನು ಹಾದಿಗೆ ಬರುತ್ತಾನೆ. ಆದರೆ ತಾಯಿತಂದೆಗಳ ಹೊರತು ಯಾರೂ ಆ ಹುಡುಗನಿಗೆ ಸಿಟ್ಟುಮಾಡ ಬಾರದು. ಹುಡುಗನು ಅಂಜುವಂಥ ಯಾವ ಕೆಲಸವನ್ನೂ ಎಂದೂ ಮಾಡಬಾರದು. ಏಕೆಂದರೆ, ಪ್ರತಿಯೊಂದು ಮಾನಸಿಕ ಪರೀಕ್ಷೆಯು ಕೆಲವಂಶದಲ್ಲಿ ಭಾವನಾಪರೀಕ್ಷೆಯೂ ಆಗಿರುತ್ತದೆ. ಆದುದರಿಂದ ಯಾವಾ ಗಲೂ ಹುಡುಗರ ಮನಸ್ಸನ್ನು ಹುರುಪಿನಲ್ಲಿಡಬೇಕಾಗುವದು. ಅವರಿಗೆ ಯಾವಾಗಲೂ ಪ್ರಶ್ನೆಗಳ ಉತ್ತರಗಳನ್ನು ಕೊಡುವದಕ್ಕೆ ಉತ್ಸಾಹವೆನಿ ಸುತ್ತಿರಬೇಕು. ಪ್ರಸ್ತುತ ಲೇಖಕನಿಗೆ ಹುಡುಗರು ತಮಗೆ ಇನ್ನೂ ಪ್ರಶ್ನೆ ಗಳನ್ನು ಮಾಡಿರಿ ಎಂದು ಕೇಳಿದ ಅನುಭವವುಂಟು.

**ಪರೀಕ್ಷೆಯನ್ನು ಆರಂಭಿಸುವದು.**—ಪರೀಕ್ಷೆಯ ಪ್ರತಿಯೊಂದು ಪ್ರಶ್ನೆಯನ್ನು ಕೇಳುವ ಬಗ್ಗೆ ವಿಸ್ತಾರವಾದ ವಿವರಣೆಯನ್ನು ಮುಂದೆ ಯೋಗ್ಯಸ್ಥಳದಲ್ಲಿ ಕೊಟ್ಟಿರುತ್ತದೆ.

ಇಲ್ಲಿ ಅವುಗಳಲ್ಲಿ ಕೆಲವು ಸಾಮಾನ್ಯ ತತ್ತ್ವಗಳ ವಿಚಾರವನ್ನು ಮಾಡು ವದು ಅವಶ್ಯವಿದೆ. ಹುಡುಗನ ವಿಶ್ವಾಸವನ್ನು ಸಂಪಾದಿಸಿದ ತರುವಾಯ ಅವನ ಮನವು ಏಕಾಗ್ರವಾದ ಬಳಿಕ ಪರೀಕ್ಷೆಯನ್ನು ಪ್ರಾರಂಭಿಸಬೇಕು. ಪ್ರಶ್ನೆಯೊಳಗಿನ ಶಬ್ದರಚನೆಯಲ್ಲಿ ಏನೂ ಅದಲುಬದಲು ಮಾಡಕೂಡದು. ಈ ಪುಸ್ತಕದಲ್ಲಿ ಕೊಟ್ಟ ಪ್ರಶ್ನೆಗಳ ಹೊರತು ಅವುಗಳ ಸ್ಪಷ್ಟೀಕರಣಕ್ಕಾಗಿ ಯಾವ ಹೊಸ ಪ್ರಶ್ನೆಗಳನ್ನೂ ಕೇಳಬಾರದು. ಮತ್ತು ಪರೀಕ್ಷಕನು ಉತ್ತ ರವು ತಪ್ಪು ಇದೆ ಎಂದು ಬಾಯಿಂದ ಅನ್ನಬಾರದು. ಹುಬ್ಬಿನ ಸನ್ನೆಯಿಂದ ತಿಳಿಸುವದು ಮೊದಲಾದದ್ದನ್ನೂ ಮಾಡಕೂಡದು.

ಪ್ರಶ್ನೆಗಳನ್ನು ಸ್ಪಷ್ಟವಾಗಿಯೂ ಸಾವಕಾಶವಾಗಿಯೂ ಕೇಳಬೇಕು. ಪ್ರಶ್ನೆಯೊಳಗಿನ ಮುಖ್ಯಶಬ್ದದ ಮೇಲೆ ಅಘಾತಕೊಟ್ಟು ಉಚ್ಚರಿಸಬೇಕು. ಎರಡನೆಯ ಬಾರಿ ಕೇಳುವದಕ್ಕೆ ಆಸ್ಪದವನ್ನಿಟ್ಟ ಪ್ರಶ್ನೆಗಳನ್ನು ಗೊತ್ತು ಮಾಡಿದ ವೇಳೆಯಾದ ಬಳಿಕ ಮತ್ತೆ ಕೇಳಬೇಕು. ಗೊತ್ತುಮಾಡಿಕೊಂಡ ವೇಳೆಯು ಮುಗಿಯುವ ವರೆಗೆ ಉತ್ತರದ ಹಾದಿಯನ್ನು ನೋಡಬೇಕು.

ಐದು ವರ್ಷದ ಕೆಳಗಿನ ಹುಡುಗರು ಚಂಚಲಸ್ವಭಾವದವರಿರುವರು.

ಆದರಿಂದ ಅವರ ಲಕ್ಷ್ಯವನ್ನು ಎಳೆಕೊಳ್ಳುವದು ಬಹಳ ಕಠಿಣ. ಇಂಥ ಹುಡುಗರ ವಿಷಯದಲ್ಲಿ "ಅಂಕೆ ಮತ್ತು ಅಕ್ಷರ—ಇವುಗಳನ್ನು ಮರಳಿ ಹೇಳುವದು" ಈ ಪ್ರಶ್ನೆಗಳ ಹೊರತು ಬೇರೆ ಪ್ರಶ್ನೆಗಳನ್ನು ಬೇಕಾದಷ್ಟು ಬಾರಿ ಕೇಳಲು ಅವಕಾಶವಿಟ್ಟಿದೆ. ಹುಡುಗನ ಲಕ್ಷ್ಯವು ತಮ್ಮ ಕಡೆಗೆ ಇರುವದೆಂಬ ನಿಶ್ಚಯವಾದ ಬಳಿಕ ಅಂಕೆ ಮತ್ತು ಅಕ್ಷರ—ಇವುಗಳನ್ನು ಮಾತ್ರ ಒಂದೇ ಬಾರಿ ಕೇಳಬೇಕು. ಬೇರೆ ಸಂದರ್ಭದಲ್ಲಿ ಪ್ರಶ್ನೆಯನ್ನು ಮತ್ತೊಮ್ಮೆ ಕೇಳಬೇಕೋ ಕೇಳಬೇಕಾಗಿದ್ದರೆ ಎಷ್ಟು ಹೊತ್ತಿನ ತರುವಾಯ ಕೇಳಬೇಕು ಈ ಮಾಹಿತಿಯು ಯೋಗ್ಯಸ್ಥಳದಲ್ಲಿ ಸಂಪೂರ್ಣವಾಗಿ ಕೊಡಲ್ಪಟ್ಟಿದೆ. ಇದಕ್ಕೂ ಮೊದಲು ಪ್ರಕಟಿತವಾದ ಬೇರೆ ಬೇರೆ ಮಾನಸ ಶಾಸ್ತ್ರದೊಳಗಿನ ಬುದ್ಧಿಪರೀಕ್ಷೆಯ ಪ್ರಶ್ನೆಮಾಲೆಯಲ್ಲಿ ಈ ಮುಖ್ಯ ಸಂಗತಿಯನ್ನು ಸ್ಪಷ್ಟವಾಗಿ ಹೇಳಿಲ್ಲ. ಕೆಲವು ಸಂದರ್ಭಗಳಲ್ಲಿ ಸೂಚನೆ ಕೊಡುವಾಗ ಪ್ರಶ್ನೆಗಳನ್ನು ಮತ್ತೆ ಕೇಳಬೇಕು ಎಂದು ಮಾತ್ರ ಹೇಳಿದೆ. ಆದರೆ ಎಷ್ಟು ಬಾರಿ ಕೇಳಬೇಕೆಂಬದನ್ನು ಹೇಳಿಲ್ಲ. ಪ್ರಶ್ನೆಯನ್ನು ಒಮ್ಮೆ ಕೇಳುವದು ಮತ್ತು ಅದನ್ನು ಮತ್ತೊಮ್ಮೆ ಇಲ್ಲವೆ ಎರಡು ಬಾರಿ ಕೇಳುವದು—ಇವುಗಳಲ್ಲಿ ಬಹಳ ಹೆಚ್ಚುಕಡಿಮೆಯಿದೆ. ಹಿಂದುಳಿದ ಹುಡುಗರಿಗೆ ಪ್ರಶ್ನೆಯನ್ನು ಎರಡು-ಮೂರು ಬಾರಿ ಕೇಳಿದ ತರುವಾಯ ಸ್ವಲ್ಪ ಸ್ವಲ್ಪ ತಿಳಿಯತೊಡಗುವದು. ಕೆಲವು ಪ್ರಶ್ನೆಗಳ ವಿಷಯದಲ್ಲಿ ಎಷ್ಟು ವೇಳೆ ಕೊಡಬೇಕೆಂಬುದು ನಿರ್ಣಯಿಸಲ್ಪಟ್ಟಿರುವದೇನೋ ನಿಜ; ಆದರೂ ಎಷ್ಟೋ ಪ್ರಶ್ನೆಗಳ ವಿಷಯದಲ್ಲಿ ವೇಳೆಯ ಮರ್ಯಾದೆಯನ್ನು ನಿರ್ಣಯಿಸಿರುವದಿಲ್ಲ. ಪ್ರಶ್ನೆಯನ್ನು ಕೇಳಿದ ಬಳಿಕ ಒಬ್ಬ ಹುಡುಗನು ಸುಮ್ಮನೆ ನಿಂತರೆ ಆ ಹುಡುಗನು ವಿಚಾರಮಾಡುವನೋ ಇಲ್ಲವೆ ಉತ್ತರ ಕೊಡುವದಕ್ಕೆ ಅವನಿಗೆ ಆಗುವಂತಿಲ್ಲವೋ ಎಂಬದನ್ನು ತಿಳಿದುಕೊಳ್ಳುವದಕ್ಕೆ ಮಾರ್ಗವಿರುವದಿಲ್ಲ. ಈ ಮೇರೆಗೆ ಪರೀಕ್ಷಕನು ಬಹಳ ವೇಳೆ ದಾರಿ ನೋಡಿದರೂ ಉತ್ತರವು ದೊರೆಯುವದಿಲ್ಲ. ಆದುದರಿಂದ ಪ್ರಸ್ತುತ ಸುಧಾರಿಸಿದ "ಬೀನೇ" ಪ್ರಶ್ನೆಮಾಲೆಯಲ್ಲಿ ಈ ವೇಳೆಗಳು ನಿರ್ಣಯಿಸಲ್ಪಟ್ಟಿವೆ. ಮತ್ತು ಒಮ್ಮೆ ಕೇಳಿದ ಪ್ರಶ್ನೆಯನ್ನು ಮತ್ತೆ ಕೇಳುವದಿದ್ದರೆ ಅದನ್ನು ಎಷ್ಟು ಬಾರಿ ಕೇಳಬೇಕು ಮತ್ತು ಎಷ್ಟು ವೇಳೆಯ ತರುವಾಯ ಕೇಳಬೇಕು ಎಂಬುದರ ಸ್ಪಷ್ಟ ವಿವರಣೆಯು ಕೊಟ್ಟಿದೆ. ಬರ್ಟನು ಈ ವಿಷಯದಲ್ಲಿ—"ಪರೀಕ್ಷಕರು

ವಿದ್ಯೆಯ ದುರಭಿಮಾನದಿಂದ ಅವ್ಯವಹಾರ್ಯರು ಆಗಬಾರದು " ಎಂದು ಹೇಳಿರುವನು. ಅವನು ಹೇಳುವದೇನೆಂದರೆ—" ಮೂರು ಮಿನೀಟಿನಲ್ಲಿ ಅರುವತ್ತು ಶಬ್ದಗಳನ್ನು ಹೇಳುವದು "—ಈ ತರದ ಪ್ರಶ್ನೆಗಳಲ್ಲಿ ನಿಶ್ಚಿತವಾದ ವೇಳೆಯಲ್ಲಿ ಅರ್ಧ ಸೆಕೆಂಡು ಕೂಡ ಹೆಚ್ಚು ಕಡಿಮೆಯಾಗತಕ್ಕದ್ದಲ್ಲ; ಆದರೆ ಮತ್ತೆ ಬೇರೆ ಆಕಲನಶಕ್ತಿಯಂತಹ ಪ್ರಶ್ನೆಗಳಲ್ಲಿ ಕೆಲವು ಸೆಕೆಂಡು ಹೆಚ್ಚಿಗೆ ಕೊಟ್ಟರೆ ಯಾವ ಅಡ್ಡಿಯೂ ಇಲ್ಲ. ಆದರೆ ಏಕರೂಪತೆಯ ದೃಷ್ಟಿಯಿಂದ ಪರೀಕ್ಷಕನು ಸ್ವಲ್ಪಮಟ್ಟಿಗೆ ವೇಳೆಯ ವಿಷಯದಲ್ಲಿ ಶಿಥಿಲನಾಗಿರುವದಕ್ಕಿಂತ ದೃಢನಾಗಿರುವದೇ ಒಳ್ಳೆಯದು. ಏಕೆಂದರೆ, ಒಮ್ಮೆ ಪರೀಕ್ಷಕನು ವೇಳೆಯಲ್ಲಿ ಶಿಥಿಲತೆಯನ್ನು ತೋರಿಸತೊಡಗಿದನೆಂದರೆ—ವೇಳೆಯನ್ನು ಎಷ್ಟು ಹೆಚ್ಚಿಗೆ ಕೊಡಬೇಕೆಂಬ ವಿಷಯದಲ್ಲಿ ನಿಯಮವೇ ಉಳಿಯುವದಿಲ್ಲ. ಆದುದರಿಂದ ನಾವು ಹೇಳುವುದೇನೆಂದರೆ—ಉತ್ತರ ಹೇಳುವದಕ್ಕೆ ಬೇಕಾದರೆ ಹೆಚ್ಚು ವೇಳೆ ಕೊಡಬಹುದು. ಆದರೆ ಒಮ್ಮೆ ಗೊತ್ತುಮಾಡಿದ ಬಳಿಕ ಅದರಲ್ಲಿ ಏನೂ ಹೆಚ್ಚು ಕಡಿಮೆ ಮಾಡಕೂಡದು. ಇದಕ್ಕೆ ಒಂದೇ ಒಂದು ಅಪವಾದ ಉಂಟು. ಅದು ಯಾವದೆಂದರೆ, ಹುಡುಗನ ಲಕ್ಷ್ಯವು ಇಲ್ಲದಿದ್ದರೆ ಇಲ್ಲವೆ ಪರೀಕ್ಷೆ ನಡೆದಾಗ ಅವನ ಲಕ್ಷ್ಯವು ಎರಡನೆಯ ಕಡೆಗೆ ಹತ್ತಿದರೆ ಆ ಪ್ರಶ್ನೆಯನ್ನು ಅಲ್ಲಿಗೇ ಬಿಟ್ಟುಬಿಡಬೇಕು. ಮತ್ತು ಬೇರೆ ಪ್ರಶ್ನೆಯನ್ನು ಕೇಳಿ, ಬಳಿಕ ಸ್ವಲ್ಪ ವೇಳೆಯ ತರುವಾಯ ಆ ಪ್ರಶ್ನೆಯನ್ನು ಕೇಳಬೇಕು ಇಲ್ಲವೆ ಆ ಪ್ರಶ್ನೆಯನ್ನೇ ಬಿಟ್ಟು ಅದರ ಬದಲು ವೈಕಲ್ಪಿಕ ಪ್ರಶ್ನೆಗಳಲ್ಲೊಂದನ್ನು ಕೇಳಬೇಕು. ಎಲ್ಲ ಪರೀಕ್ಷೆಯಲ್ಲಿ ಹುಡುಗನ ಉತ್ತರವನ್ನು ಅಕ್ಷರಶಃ ಬರೆದಿಡಬೇಕು. ಇದರ ಸಲುವಾಗಿ ಕೆಲವು ಸಾಂಕೇತಿಕ ಶಬ್ದಗಳನ್ನು ಉಪಯೋಗಿಸತಕ್ಕದ್ದು; ಇಲ್ಲವೆ ಶಬ್ದಗಳ ಮೊದಲಿನ ಅಕ್ಷರವನ್ನು ಬರೆದುಕೊಳ್ಳಬೇಕು. ಬಳಿಕ ಬಿಟ್ಟ ಅಕ್ಷರಗಳನ್ನು ತುಂಬಬೇಕು. ಈ ಮೇರೆಗೆ ಯಾರ ಸಹಾಯವೂ ಇಲ್ಲದೆ ಒಬ್ಬ ಪರೀಕ್ಷಕನು ಈ ಕೆಲಸವನ್ನು ಮಾಡಬಹುದು. ಈ ಪುಸ್ತಕದ ಸಂಗಡ ಪ್ರಕಟಿಸಿದ ಛಾಪಿ ನಮೂನೆಗಳನ್ನು ಉಪಯೋಗಮಾಡಿಕೊಂಡಲ್ಲಿ ಅದರ ಹಿಂಬದಿಯಲ್ಲಿ ಉತ್ತರಗಳನ್ನು ಬರೆಯಬೇಕು; ಮತ್ತು ಅದರ ಮುಂಬದಿಯಲ್ಲಿ ಗುಣಗಳನ್ನೂ ಅವುಗಳ ಒಟ್ಟು ಮುಂತಾದದ್ದನ್ನೂ ಬರೆಯಬೇಕು. ಉತ್ತರವನ್ನು ಪೂರ್ಣವಾಗಿ ಬರೆದುಕೊಳ್ಳುವದಂತೂ ಬಹಳ ಉತ್ತಮವಾದದು. ಆ ಉತ್ತರಗಳನ್ನು ಅವಕಾಶ

ವಾದಾಗ ತಪಾಸು ಮಾಡುವದಕ್ಕಾಗುವದು; ಇಲ್ಲವೆ ಗುಣಗಳನ್ನು ಕೊಡುವ ಪದ್ಧತಿಯನ್ನು ಬದಲಿಸುವದು ಅವಶ್ಯವೆಂದು ತೋರಿದಲ್ಲಿ ಹೀಗೆ ಮಾಡಿದ್ದು ಅನುಕೂಲವಾಗುವದು. ಇದಲ್ಲದೆ ಮುಂದೆ ಎಂದಾದರೂ ಇದರ ಬಗ್ಗೆ ಹೆಚ್ಚಿಗೆ ಶೋಧಮಾಡುವವರಿಗೆ ಈ ಪೂರ್ಣ ಉತ್ತರಗಳು ಉಪಯುಕ್ತವಾಗುವವು. ಒಂದು ಪ್ರಶ್ನೆಯಲ್ಲಿ ಮಾತ್ರ ಅಂದರೆ "ಮೂರು ಮಿನೀಟಿನಲ್ಲಿ ಅರುವತ್ತು ಶಬ್ದಗಳನ್ನು ಕೊಡುವದು" ಎಂಬದ ರಲ್ಲಿ ಸಹಾಯಕನ ಸಹಾಯವಿಲ್ಲದೆ ಪ್ರತಿಯೊಂದು ಶಬ್ದವನ್ನು ಬರೆದು ಕೊಳ್ಳುವದು ಸಾಧ್ಯವಾಗದು. ಇಂಥ ಪ್ರಸಂಗದಲ್ಲಿ ಹುಡುಗರು ಕೊಟ್ಟ ಶಬ್ದಗಳಲ್ಲಿ ವಸ್ತು, ಕ್ರಿಯಾಪದ, ಪ್ರಾಣಿ, ಭಾವವಾಚಕನಾಮ ಎಂಬ ವರ್ಗೀಕರಣವನ್ನು ಮಾಡಿಕೊಂಡು ಬರೆದುಕೊಳ್ಳಬೇಕು.

ಆರಂಭದಲ್ಲಿ ಹುಡುಗನು ಸಹಜವಾಗಿ ಉತ್ತರಗಳನ್ನು ಕೊಡಬಹು ದಾದ ಹಗುರು ಪ್ರಶ್ನೆಗಳನ್ನು ಕೇಳಬೇಕು. ಬಳಿಕ ಹೆಚ್ಚು ಹೆಚ್ಚು ಕಠಿಣ ಪ್ರಶ್ನೆಗಳನ್ನು ಕೇಳಬೇಕು. ಈ ವಿಷಯದಲ್ಲಿ ಬೀನೇ ಎಂಬ ಮಾನಸ ಶಾಸ್ತ್ರಜ್ಞನು ಹುಡುಗನ ವಯಸ್ಸಿಗೆ ಸರಿಯಾದ ಪ್ರಶ್ನೆಗಳನ್ನೇ ತೆಗೆದು ಕೊಂಡು ಆರಂಭಮಾಡಬೇಕೆಂದು ಹೇಳುತ್ತಾನೆ. ಈ ಕ್ರಮವು ಮಧ್ಯಮ ಬುದ್ಧಿಯ ಹುಡುಗರ ವಿಷಯದಲ್ಲಿ ತಕ್ಕದ್ದಾಗುವದು. ಆದರೆ ತೀರ ಹಿಂದುಳಿದ ಹುಡುಗರಿಗೆ ಈ ತರದ ಪ್ರಶ್ನೆಗಳು ಆರಂಭಕ್ಕೆ ಕಠಿಣವೆನಿಸು ವವು. ಇಂಥ ಹುಡುಗರಿಗೆ ಅವರ ವಯಸ್ಸಿಗಿಂತಲೂ ಒಂದೆರಡು ವರ್ಷ ಕಡಿಮೆ ವಯಸ್ಸಿನವರ ಪ್ರಶ್ನೆಗಳಿಂದ ಆರಂಭಮಾಡತಕ್ಕದ್ದು. ಸಾಮಾನ್ಯ ವಾಗಿ ಮೊದಲು ಹುಡುಗರ ವಯಸ್ಸಿನ ಪ್ರಶ್ನೆಗಳಿಂದ ಆರಂಭಿಸಿ, ಮುಂದೆ ಶಕ್ಯವಿದ್ದಮಟ್ಟಿಗೆ ಮೇಲಕ್ಕೆ ಹೋಗಿ ಬಳಿಕ ಕೆಳಗಿನ ಪ್ರಶ್ನೆ ಗಳನ್ನು ಕೇಳುವದು ಒಳ್ಳೆಯದೆನಿಸುವದು. ಏಕೆಂದರೆ, ಈ ಪದ್ಧತಿಯಿಂದ ಹುಡುಗನು ದಣಿದ ವೇಳೆಯಲ್ಲಿ ಅವನಿಗೆ ಹಗುರಾದ ಪ್ರಶ್ನೆಗಳು ಬರುವವು. ಹುಡುಗನ ಪ್ರತಿಯೊಂದು ಉತ್ತರವನ್ನು "ಶಾಬಾಸ", "ಉತ್ತಮ" ಇಂಥ ಶಬ್ದಗಳಿಂದ ವರ್ಣಿಸುತ್ತ ಸ್ವೀಕರಿಸಬೇಕು. ಉತ್ತರವು ತಪ್ಪೆಂದು ಅವರಿಗೆ ತಿಳಿಯಗೊಡಬಾರದು. ಹುಡುಗನಿಗೆ ತನ್ನ ಉತ್ತರವು ಒಂದು ವೇಳೆ ತಪ್ಪೆಂದು ತಿಳಿದರೆ ಅವನನ್ನು ಮೋಸಗೊಳಿಸಬಾರದು. "ಒಂದು ವೇಳೆ ತಪ್ಪಿರಬಹುದು ಆದರೂ ಏನೂ ಅಡ್ಡಿ ಇಲ್ಲ, ಮುಂದಿನ ಪ್ರಶ್ನೆಗಳ

ಉತ್ತರಗಳನ್ನು ನೀನು ಸರಿಯಾಗಿ ಕೊಡುವೆ ಎಂದು ನನ್ನ ಸಂಬುಗೆಯಿದೆ" ಹೀಗೆನ್ನ ಬೇಕು. ಏಕೆಂದರೆ, ಹುಡುಗನು ಅಂಜಿದರೆ ಪರೀಕ್ಷೆಯನ್ನು ಸಾಗಿಸುವದು ಅಶಕ್ಯವಾಗುವದು. ಇದರ ಸಲುವಾಗಿಯೇ ಹುಡುಗರ ಕಡೆಗೆ ಒಂದೇ ಸವನೆ ನೋಡಬಾರದು. ಎಷ್ಟೋ ಹುಡುಗರು ಆತುರ ಸ್ವಭಾವದವರಿದ್ದು ಉತ್ತರಗಳನ್ನು ಬೇಗನೆ ವಿಚಾರಮಾಡದೆ ಕೊಡುವರು. ಇಂಥ ಸಮಯದಲ್ಲಿ ಅವರಿಗೆ ಚೆನ್ನಾಗಿ ವಿಚಾರಮಾಡಿ ಉತ್ತರಗಳನ್ನು ಕೊಡಿರೆಂದು ಸೂಚಿಸಬೇಕು. ಎಷ್ಟೋ ಹುಡುಗರು ಕಣ್ಣಿನಲ್ಲಿ, ಕಿವಿಯಲ್ಲಿ ಇಲ್ಲವೆ ಮಾತಿನಲ್ಲಿ ಕುಂದಿದ್ದವರು ಇರುವರು. ಈ ವ್ಯಂಗಗಳನ್ನು ಪರೀಕ್ಷೆಯ ಪೂರ್ವದಲ್ಲಿಯೇ ನೋಡಿಕೊಳ್ಳಬೇಕು. ಸಾಧಾರಣವಾಗಿ, ಹುಡುಗನು ಎಲ್ಲಿಯ ವರೆಗೆ ಉತ್ತರಗಳನ್ನು ಕೊಡಬಲ್ಲನೆಂಬದು ಪರೀಕ್ಷಕನಿಗೆ ಪರೀಕ್ಷೆ ನಡೆದ ಕಾಲಕ್ಕೆ ತಿಳಿಯುತ್ತದೆ. ತೀರ ಹಿಂದುಳಿದ ಹುಡುಗರು ಈ ಮಾತಿಗೆ ಅಪವಾದವಾಗಿರುವರು. ಒಮ್ಮೊಮ್ಮೆ ಅವರು ತಮ್ಮ ಶಕ್ತಿಗೆ ಮೀರಿದ ಒಂದೆರಡು ಪ್ರಶ್ನೆಗಳ ಉತ್ತರಗಳನ್ನು ಸರಿಯಾಗಿ ಕೊಡುವರು ಇಲ್ಲವೆ ಒಮ್ಮೊಮ್ಮೆ ತೀರ ಕೆಳಗಿನ ಒಂದೆರಡು ಸುಲಭ ಪ್ರಶ್ನೆಗಳನ್ನು ತಪ್ಪುವರು. ಉದಾಹರಣಾರ್ಥವಾಗಿ, ಅವರು ಒಮ್ಮೊಮ್ಮೆ ಒಂದು ವರ್ಷದ ಎಲ್ಲ ಪ್ರಶ್ನೆಗಳನ್ನೂ ತಪ್ಪುವರು. ಆದರೆ ಮುಂದಿನ ವಯಸ್ಸಿನ ಒಂದೆರಡು ಪ್ರಶ್ನೆಗಳ ಉತ್ತರಗಳನ್ನು ಸರಿಯಾಗಿ ಕೊಡುವರು. ಇಂಥ ಹುಡುಗರ ಪರೀಕ್ಷೆ ತೆಗೆದುಕೊಳ್ಳುವಾಗ ಸಾಕಷ್ಟು ಮೇಲ್ತರದ ಪ್ರಶ್ನೆಗಳನ್ನು ಕೇಳಬೇಕು. ಒಟ್ಟಿನ ಮೇಲೆ ಹುಡುಗನ ಪರೀಕ್ಷೆಯು ಸಂಪೂರ್ಣವಾಗಲಿಕ್ಕೆ ಬೇಕು. ಇಂಥ ಪ್ರಸಂಗದಲ್ಲಿ ಸರಿಯಾಗಿ ಉತ್ತರ ಕೊಟ್ಟ ಮೇಲಿನ ವಯಸ್ಸಿನ ಒಂದೆರಡು ಪ್ರಶ್ನೆಗಳಿಗೆ ಗುಣಗಳನ್ನು ಕೊಡಲೇ ಬೇಕು. ಅದರಂತೆ ಕೆಲವು ಹುಡುಗರು ಒಂದು ವರ್ಷದ ಎಲ್ಲ ಪ್ರಶ್ನೆಗಳನ್ನು ಸರಿಯಾಗಿ ಹೇಳುವರು. ಆದರೆ ಅದರ ಹಿಂದಿನ ವರ್ಷದ ಒಂದೆರಡು ಪ್ರಶ್ನೆಗಳನ್ನು ತಪ್ಪುವರು. ಇಂಥಲ್ಲಿ ಈ ಪ್ರಶ್ನೆಗಳ ಸಲುವಾಗಿ ಅವರ ಗುಣಗಳನ್ನು ಕಡಿಮೆಮಾಡಬೇಕು. ಬರ್ಟನು ಎನ್ನುವದೇನೆಂದರೆ, ಯಾವನೊಬ್ಬ ಹುಡುಗನು ಕೆಳಗಿನ ವರ್ಷದ ಒಂದೆರಡು ಪ್ರಶ್ನೆಗಳನ್ನು ತಪ್ಪಿ ಮುಂದಿನ ವರ್ಷದ ಎಲ್ಲ ಪ್ರಶ್ನೆಗಳನ್ನು ಸರಿಯಾಗಿ ಹೇಳಿದರೆ ಆ ತಪ್ಪುಗಳನ್ನು ಲೆಕ್ಕದಲ್ಲಿ ಹಿಡಿಯಬಾರದು. ಆದರೆ ಇದು ಸರಿಯಾಗಲಾರದು. ಏಕೆಂದರೆ, ಹಿಂದಿನ ವರ್ಷದ ಇಂಥ ತಪ್ಪು

ಗಳನ್ನು ಕ್ಷಮಿಸಿದರೆ ಮುಂದಿನ ವರ್ಷದ ಸರಿಯಾಗಿ ಹೇಳಿದ ಪ್ರಶ್ನೆಗಳನ್ನೂ ಬಿಡಬೇಕಾಗುವದು.

ಹುಡುಗನು ಯಾವಾಗಲೂ ಬೇಸರಗೊಳ್ಳಬಾರದು. ಆದುದರಿಂದ ಪರೀಕ್ಷೆಯನ್ನು ಯಾವಾಗಲೂ ಪೂರ್ವಾಹ್ಣದಲ್ಲಿ ತೆಗೆದುಕೊಳ್ಳುವದು ಒಳ್ಳೆಯದು. ಏಕೆಂದರೆ, ಆ ತರುವಾಯ ಹುಡುಗರು ಬೇಸರಗೊಳ್ಳುವ ಸಂಭವವುಂಟು. ಇದರ ಸಲುವಾಗಿಯೇ ಸಾಧಾರಣ ಒಂದು ತಾಸು ಪರೀಕ್ಷೆಯಾದ ಕೂಡಲೆ ಹುಡುಗನು ಬೇಸರಗೊಂಡಿರುವನೋ ಹೇಗೆ ಎಂಬುದನ್ನು ನೋಡಬೇಕು. ಹುಡುಗನು ಬೇಸರಗೊಂಡಿದ್ದರೆ ಪರೀಕ್ಷೆಯನ್ನು ನಿಲ್ಲಿಸಿಬಿಡಬೇಕು. ಮತ್ತು ಉಳಿದ ಪರೀಕ್ಷೆಯನ್ನು ಹಿಂದುಗಡೆ ಯಾವಾಗಲಾದರೂ ತೆಗೆದುಕೊಳ್ಳಬೇಕು. ಚುರುಕು ಮತ್ತು ಮಧ್ಯಮ ಹುಡುಗರಿಗಿಂತ ಹಿಂದುಳಿದ ಹುಡುಗರು ತೀವ್ರ ಬೇಸರುವರು. ಹುಡುಗರ ನಡೆನುಡಿಗಳಿಂದ ಪರೀಕ್ಷಕನು ಮೊದಲೇ ಅವರ ವಿಷಯವಾಗಿ ಒಳ್ಳೆಯ ಇಲ್ಲವೆ ಕೆಟ್ಟ ಅಭಿಪ್ರಾಯವನ್ನು ಮಾಡಿಕೊಂಡಿರಬಾರದು. ಕೇವಲ ಹುಡುಗರ ಉತ್ತರಗಳ ಯೋಗ್ಯತೆಯನ್ನು ನೋಡಿಯೇ ಅವರಿಗೆ ಗುಣಗಳನ್ನು ಕೊಡಬೇಕು. ಕೆಲವು ಹುಡುಗರು, ವಿಶೇಷವಾಗಿ ಹುಡುಗಿಯರು, ಬಹಳ ಮಾತಾಡುತ್ತಾರೆ; ಮತ್ತು ಹೆಚ್ಚು ತಿಳಿದವರಂತೆ ನಟಿಸುವರು. ಆದರೆ ಪ್ರತ್ಯಕ್ಷ ಪರೀಕ್ಷೆಯ ಕಾಲದಲ್ಲಿ ಹುಡುಗರ ನಿಜವಾದ ಜ್ಞಾನವು ತಿಳಿಯುವದು. ಒಬ್ಬ ಹುಡುಗಿಯ ವಿಷಯದಲ್ಲಿ ಪ್ರಕೃತ ಲೇಖಕನಿಗೆ ಚೆನ್ನಾಗಿ ಸ್ಮರಣೆಯಲ್ಲಿರುವದೇನೆಂದರೆ, ಆ ಹುಡುಗಿ ಬಹಳ ಮಾತಾಡುವವಳು; ಆಕೆ ಹೊರ ಹೊರಗೆ ಬಹಳ ಜಾಣೆ ಇರಬೇಕೆಂದೆನಿಸುತ್ತಿತ್ತು. ಆದರೆ ಪರೀಕ್ಷೆಯ ತರುವಾಯ ಆ ಹುಡುಗಿಯ ಬುದ್ಧಿಯ ಪ್ರಮಾಣವನ್ನು ನೋಡಿ ಲೇಖಕನಿಗೂ ಆ ಹುಡುಗಿಗೂ ಇಬ್ಬರಿಗೂ ಬಹಳ ಆಶ್ಚರ್ಯವಾಯಿತು. ಆ ಹುಡುಗಿಗೆ ಬಹಳ ಕೆಡುಕೆನಿಸಿತು. ಇಂಥ ಹುಡುಗರಿಗೆ ಪರೀಕ್ಷೆಯ ಪರಿಣಾಮವನ್ನು ಹೇಳದಿರುವದೇ ಒಳ್ಳೆಯದು. ಹುಡುಗರನ್ನು ಯಾವಾಗಲೂ ಆನಂದದಲ್ಲಿಡಬೇಕು. ಅವರ ಲಕ್ಷ್ಯವು ಅಥವಾ ಕುತೂಹಲವು ಕಡಿಮೆಯಾಗುವಂತೆ ಮಾಡಬಾರದು. ಬೇರೆ ಬೇರೆ ಪ್ರಶ್ನೆಗಳನ್ನು ಕೇಳಿ ಇದನ್ನು ಸಾಧಿಸಿಕೊಳ್ಳಬಹುದು. ಬುದ್ಧಿಮಾಪನದ ಪ್ರಶ್ನೆಮಾಲಿಕೆಯಲ್ಲಿಯ ಪ್ರಶ್ನೆಗಳ ಕ್ರಮವು ಇದೇ ತತ್ತ್ವದಿಂದ ಗೊತ್ತುಮಾಡಲ್ಪಟ್ಟಿರುವದು.

ಆದರೆ ಒಮ್ಮೊಮ್ಮೆ ಈ ಉದ್ದೇಶವು ಈಡೇರುವದಿಲ್ಲವೆಂದು ಕಂಡುಬಂದಲ್ಲಿ ಈ ಕ್ರಮವನ್ನು ಹೆಚ್ಚುಕಡಿಮೆಮಾಡುವದಕ್ಕೆ ಹಿಂದುಮುಂದು ನೋಡಬಾರದು. ಪರೀಕ್ಷೆ ನಡೆದ ಕಾಲಕ್ಕೆ ನಡುವೆ ಬಹಳ ವೇಳೆ ನಿಲ್ಲಬಾರದು. ಮತ್ತು ಹುಡುಗರಿಗೆ ಉತ್ತರವನ್ನು ಹೇಳಲಿಕ್ಕೆ ಅವಕಾಶಕೊಡದೆ ಬೇಗ ಬೇಗನೆ ಪ್ರಶ್ನೆಗಳನ್ನು ಕೇಳಬಾರದು. ಪರೀಕ್ಷೆಗಾಗಿ ಬಹಳ ಹುಡುಗರನ್ನು ಕರೆದಿದ್ದರೆ ಒಬ್ಬ ಹುಡುಗನನ್ನೇ ಒಳಗೆ ಕರೆದು ಆತನ ಪರೀಕ್ಷೆ ತೆಗೆದುಕೊಳ್ಳಬೇಕು. ಮತ್ತು ಉಳಿದ ಹುಡುಗರನ್ನು ಹೊರಗೆ ಕುಳ್ಳಿರಿಸಿ ಅವರಿಗೆ ಕಥೆಯ ಪುಸ್ತಕವನ್ನಾಗಲಿ, ಚಿತ್ರದ ಪುಸ್ತಕವನ್ನಾಗಲಿ ಕೊಡಬೇಕು. ಪರೀಕ್ಷೆಯಾದ ಕೂಡಲೆ ಹುಡುಗನು ನೆಟ್ಟಗೆ ತನ್ನ ವರ್ಗಕ್ಕೆ ಹೋಗಬೇಕು. ಅವನು ಪರೀಕ್ಷೆಯ ಪ್ರಶ್ನೆಗಳ ಬಗ್ಗೆ ಬೇರೆ ಹುಡುಗರ ಕೂಡ ಮಾತಾಡುತ್ತ ಕುಳ್ಳಿರಬಾರದು. ಎರಡನೆಯ ಹುಡುಗರಿಗೆ ಉಪಯೋಗವಾಗುವಂಥ ಸಂಗತಿಗಳನ್ನು ಒಂದು ವೇಳೆ ಅವರಿಗೆ ಹೇಳಲಿಕ್ಕೆ ಬಾರದಿದ್ದರೂ ಪರೀಕ್ಷೆ ಮುಗಿದ ಹಲವು ಹುಡುಗರು ಪ್ರಶ್ನೆಗಳ ಸಂಬಂಧದಿಂದ ಮಾತಾಡತೊಡಗಿದರೆ, ಮಹತ್ತ್ವದ ಪ್ರಶ್ನೆಗಳು ಅವರಿಗೆ ಗೊತ್ತಾಗುವ ಸಂಭವವಿರುತ್ತದೆ. ಇದರ ಸಲುವಾಗಿ ಚಿಕ್ಕ ಹುಡುಗರ ಇಲ್ಲವೆ ಹಿಂದುಳಿದ ಹುಡುಗರ ಪರೀಕ್ಷೆಯನ್ನು ಚುರುಕು ಹುಡುಗರಿಗಿಂತ ಇಲ್ಲವೆ ದೊಡ್ಡ ಹುಡುಗರಿಗಿಂತ ಮೊದಲು ತೆಗೆದುಕೊಳ್ಳಬೇಕು.

**ಗುಣಗಳನ್ನು ಕೊಡುವ ಪದ್ಧತಿಯು.**—ಮೇಲೆ ಹೇಳಿದ ಮೇರೆಗೆ ಮಧ್ಯಮ ಹುಡುಗರ ವಿಷಯದಲ್ಲಿ ಅವರ ವಯಸ್ಸಿನ ಪ್ರಶ್ನೆಮಾಲಿಕೆಯೊಳಗಿನ ಪ್ರಶ್ನೆಗಳಿಂದಲೇ ಪರೀಕ್ಷೆಯನ್ನು ಪ್ರಾರಂಭಿಸಬೇಕು. ಅದರಲ್ಲಿಯು ಹಲವು ಪ್ರಶ್ನೆಗಳ ಉತ್ತರಗಳನ್ನು ಅವನು ಕೊಡಬಹುದು. ಆದರೆ ಕೆಲವು ಪ್ರಶ್ನೆಗಳ ಉತ್ತರಗಳನ್ನು ಅವನು ಕೊಡಲಾರನು. ಬಳಿಕ ಕ್ರಮದಿಂದ ಮುಂದಿನ ವರ್ಷದ ಪ್ರಶ್ನೆಗಳನ್ನು ಕೇಳುತ್ತ ಹೋಗಬೇಕು. ಒಂದು ವರ್ಷದ ಒಂದೂ ಪ್ರಶ್ನೆಯ ಉತ್ತರವನ್ನು ಹುಡುಗನು ಕೊಡಲಾರನೆಂದು ಕಂಡುಬಂದರೆ ಆಗ ಪರೀಕ್ಷೆಯನ್ನು ನಿಲ್ಲಿಸಬೇಕು. ಬಳಿಕ ಆ ಹುಡುಗನ ವಯಸ್ಸಿನ ಕೆಳಗಿನ ವರ್ಷದ ಪ್ರಶ್ನೆಗಳನ್ನು ಕೇಳಬೇಕು. ಈ ಕ್ರಮವನ್ನು ಅವನು ಕೆಳಗಿನ ಒಂದು ವರ್ಷದ ಎಲ್ಲಾ ಪ್ರಶ್ನೆಗಳ ಉತ್ತರಗಳನ್ನು ಹೇಳುವ ವರೆಗೂ ಸಾಗಿಸಬೇಕು. ಉಪಪ್ರಶ್ನೆಗಳ ಗುಣ

ಗಳನ್ನು ಬೇರೆಯಾಗಿ ಮಾರ್ಜಿನಿನಲ್ಲಿ ಬರೆಯಬೇಕು. ಬಳಿಕ ಇಡೀ ಪ್ರಶ್ನೆಯ ಉತ್ತರವು ಸರಿ ಇಲ್ಲವೆ ತಪ್ಪು ಎಂಬದನ್ನು ತೋರಿಸುವದಕ್ಕಾಗಿ ಕ್ರಮವಾಗಿ +, — ಈ ಚಿಹ್ನಗಳನ್ನು ಬರೆಯಬೇಕು. ಹುಡುಗರ ಉತ್ತರಗಳನ್ನು ಶಬ್ದಶಃ ಕಾಗದದ ಹಿಂಬದಿಗೆ ಬರೆದಿಡಬೇಕು. ಈ ಪ್ರಕಾರ ಬರೆದ ಕಾಗದದ ಮುಂಬದಿಯ ಸಮೂನೆ ಕೆಳಗೆ ಕೊಟ್ಟಿದೆ—[1]

ತಾರೀಖು ೧೨—೧೧—೧೯೩೨
ಪೂರ್ಣ ಹೆಸರು ಅ ಬ ಕ
ಜನ್ಮತಾರೀಖು ೧೨—೧೦—೧೯೨೨ ವಯಸ್ಸು ೧೦-೧
ಸಾಲೆ ಕ ಖ ಗ ಇಯತ್ತೆ ೪ (ಕನ್ನಡ)
ತಂದೆಯ ಹೆಸರು ಮತ್ತು ಧಂದೆ ಪ ಕ ರ
ಜಾತಿ (ಪೋಟಜಾತಿಯ ಸಹಿತ) ಹಿಂದು—ಬ್ರಾಹ್ಮಣ
ಬುದ್ಧಿಯ ವಿಷಯದಲ್ಲಿ ಶಿಕ್ಷಕನ ಅಭಿಪ್ರಾಯ ಅ ಬ ಕ ಡ ಈ
ವರ್ಗದೊಳಗಿನ ನಂಬರು ಒಟ್ಟು ಹುಡುಗರು
ಮಾತೃಭಾಷೆ ಕನ್ನಡ
ಪರೀಕ್ಷಕ— ಸ

ಪ್ರಶ್ನೆಮಾಲಿಕೆಯ ವಯುವರ್ಷ

| ಪ್ರಶ್ನೆಯ ನಂಬರು | ೭ | ೮ | ೯ | ೧೦ | ೧೨ | ೧೪ | ೧೬ | ೧೮ |
|---|---|---|---|---|---|---|---|---|
| ೧ | ಅ +<br>ಬ —<br>೧ ತ +<br>ಕ —<br>೧ ತ | — | ಅ +<br>+ | ಅ —<br>ಬ —<br>— | | | | |
| ೨ | + | ಅ +<br>+ | ಅ —<br>ಬ — —<br>ಕ — | ಅ —<br>೨ ತ —<br>ಬ —<br>ಕ — | | | | |

1 ಈ ಟಿಪ್ಪಣಿಯ ಕಾಗದದ ಹೊಸ ಫಾರ್ಮುಗಳು ಈ ಪುಸ್ತಕವನ್ನು ಪ್ರಸಿದ್ಧ ಮಾಡುವವರ ಕಡೆಗೆ ಮಾರಲಿಕ್ಕೆ ಸಿಗುವವು.

ಪ್ರಶ್ನೆಮಾಲಿಕೆಯ ವಯ ವರ್ಷ—(ಮುಂದುವರಿದುದು)

| ಪ್ರಶ್ನೆಯ ನಂಬರು | ೭ | ೮ | ೯ | ೧೦ | ೧೨ | ೧೪ | ೧೬ | ೧೮ |
|---|---|---|---|---|---|---|---|---|
| ೩ | ಅ+<br>+ | ಅ+<br>ಬ+<br>ಕ− +| ಅ−<br>ಬ−<br>ಕ− —<br>ಡ− | ೧೨ ಸೇ<br>ಅ−<br>ಬ− —<br>ಕ− | | | | |
| ೪ | ೫ ಸೇ<br>ಅ+ +<br>ಬ+<br>ಕ+ | ಅ−<br>ಬ+ +<br>ಕ−<br>ಡ+ | ಅ−<br>ಬ− —<br>ಕ− | — | | | | |
| ೫ | ೨೦ ಸೇ<br>+ | ಅ+<br>ಬ+<br>ಕ+ —<br>ಡ−<br>ಕ+<br>ಫ− | | ಅ−<br>ಬ−<br>ಕ+ — | | | | |
| ೬ | | | ೪೧ ಶಬ್ದ<br>+ | ೨೭ ಸೇ<br>—<br>೧ ಸಂಗತಿ | | | | |
| ವೈಕಲ್ಪಿಕ ೧ | ಅ+<br>ಬ+ + | — | ೧೮ ಶಬ್ದ<br>— | | | | | |
| ವೈಕಲ್ಪಿಕ ೨ | | | | | | | | |
| ವೈಕಲ್ಪಿಕ ೩ | | | | | | | | |

| | ವ. | ತಿಂ. |
|---|---|---|
| ಮಾ. ವ. = | ೭— | ೦ |
| | | ೬ |
| | | ೪ |
| | ೭— | ೧೦ |

ಬು. ಮಾ. = $\frac{೯೪}{೧೨೧} \times ೧೦೦ = \frac{೯೪೦೦}{೧೨೧} = ೭೭.೭$

ಇದಾದ ತರುವಾಯ ಹುಡುಗರ ಮಾನಸಿಕ ವಯಸ್ಸನ್ನು ಹುಡುಕಿ ತೆಗೆಯುವದು ಬಹಳ ಸುಲಭವಾಗಿರುವದು. ಹುಡುಗನಿಗೆ ಯಾವ ವಯಸ್ಸಿನ ಎಲ್ಲ ಪ್ರಶ್ನೆಗಳ ಉತ್ತರಗಳನ್ನು ಹೇಳಲಿಕ್ಕೆ ಬರುವದೋ ಅಲ್ಲಿಂದ ಎಣಿಸಲಿಕ್ಕೆ ಆರಂಭಿಸಿ ಅಷ್ಟು ಪೂರ್ಣ ವರ್ಷಗಳನ್ನು ಆ ಹುಡುಗನಿಗೆ ಹಿಡಿಯಬೇಕು. ಉದಾಹರಣಾರ್ಥವಾಗಿ, ಏಳನೆಯ ವರ್ಷದ ಎಲ್ಲ ಪ್ರಶ್ನೆಗಳ ಉತ್ತರ ಕೊಟ್ಟರೆ ಅವನಿಗೆ ಮೊಟ್ಟ ಮೊದಲು ೭ ವರ್ಷ ಕೊಡಬೇಕು. ಮುಂದಿನ ವರ್ಷದ ಪರೀಕ್ಷೆಯಲ್ಲಿ ಪ್ರತಿಯೊಂದು ವರ್ಷದ ಸಲುವಾಗಿ ೬ ಪ್ರಶ್ನೆಗಳಿರುತ್ತವೆ. ಆದುದರಿಂದ ಅದರಲ್ಲಿಯ ಒಂದು ಪ್ರಶ್ನೆಯ ಸರಿಯಾದ ಉತ್ತರಕ್ಕೆ ಎರಡು ತಿಂಗಳು ಹಿಡಿಯಬೇಕು. ಹತ್ತು ವರ್ಷದ ಮುಂದಿನ ಪ್ರಶ್ನೆಮಾಲಿಕೆಯ ವರ್ಷಗಳು ೧೨, ೧೪, ೧೬, ೧೯, ೨೨— ಈ ಪ್ರಕಾರ ಇವೆ. ಎಂದರೆ ೧೦ರಿಂದ ೧೨ ವರ್ಷಗಳವರೆಗೆ ೨ ವರ್ಷಗಳಲ್ಲಿ ೬ ಪ್ರಶ್ನೆಗಳಿರುವವು. ಆದುದರಿಂದ ಅದರೊಳಗಿನ ಒಂದು ಪ್ರಶ್ನೆಯ ಉತ್ತರವು ಸರಿಯಾದರೆ ನಾಲ್ಕು ತಿಂಗಳನ್ನು ಹಿಡಿಯಬೇಕು. ಹದಿನಾಲ್ಕನೆಯ ಮತ್ತು ೧೬ನೆಯ ವರ್ಷದ ಪ್ರಶ್ನೆಗಳಿಗೂ ಇದೇ ನಿಯಮವು ಹತ್ತುತ್ತದೆ. ಮುಂದಿನ ಪ್ರಶ್ನೆಮಾಲಿಕೆಯಲ್ಲಿ ೩ ವರ್ಷದ ಅಂತರಕ್ಕೆ ೬ ಪ್ರಶ್ನೆಗಳಿವೆ. ಆದುದರಿಂದ ೧೯ನೆಯ ಮತ್ತು ೨೨ನೆಯ ವರ್ಷದ ಪ್ರಶ್ನೆಮಾಲಿಕೆಯಲ್ಲಿಯ ಪ್ರತಿಯೊಂದು ಸರಿಯಾದ ಉತ್ತರಕ್ಕೆ ೬ ತಿಂಗಳನ್ನು ಹಿಡಿಯಬೇಕು. ಈ ಪ್ರಕಾರ ಮೇಲಿನ ಟಿಪ್ಪಣಿಯ ಕಾಗದದಲ್ಲಿ ೧೦ ವರ್ಷ ೧ ತಿಂಗಳು ವಯಸ್ಸಿನ ಹುಡುಗನು ೭ನೆಯ ವರ್ಷದ ಪರೀಕ್ಷೆಯೊಳಗಿನ ಎಲ್ಲ ಪ್ರಶ್ನೆಗಳ ಉತ್ತರಗಳನ್ನೂ ೮ನೆಯ ವರ್ಷದೊಳಗಿನ ೩ ಪ್ರಶ್ನೆಗಳ ಉತ್ತರಗಳನ್ನೂ ೯ನೆಯ ವರ್ಷದೊಳಗಿನ ೨ ಪ್ರಶ್ನೆಗಳ ಉತ್ತರಗಳನ್ನೂ ಸರಿಯಾಗಿ ಕೊಟ್ಟಿರುತ್ತಾನೆ. ಆದರೆ ೧೦ನೆಯ ವರ್ಷದ ಒಂದು ಪ್ರಶ್ನೆಯ ಉತ್ತರವನ್ನೂ ಸರಿಯಾಗಿ ಕೊಟ್ಟಿಲ್ಲ. ಆದುದರಿಂದ ಅದರ ಅಥಾವೆ ಕೆಳಗಿನಂತೆ ಇರುತ್ತದೆ—[1]

[1] ಬೀನೇನ ಪದ್ಧತಿಯಂತೆ ಪ್ರತಿಯೊಂದು ವರ್ಷದಲ್ಲಿ ಬರೇ ಐದೇ ಪ್ರಶ್ನೆಗಳನ್ನು ಕೇಳಿದರೆ ೩ ರಿಂದ ೧೦ ವರ್ಷಗಳ ವರೆಗೆ ಪ್ರತಿ ಒಂದು ಪ್ರಶ್ನೆಗೆ ·೨ ವರ್ಷ; ೧೨, ೧೪ ಮತ್ತು ೧೬ ವರ್ಷಗಳ ಪ್ರತಿ ಒಂದು ಪ್ರಶ್ನೆಗೆ ·೪ ವರ್ಷ; ೧೯ ಮತ್ತು ೨೨ ವರ್ಷಗಳ ಪ್ರತಿ ಒಂದು ಪ್ರಶ್ನೆಗೆ ·೬ ವರ್ಷ ಕೊಡಬೇಕು. ಐದಕ್ಕಿಂತ ಕಡಿಮೆ ಪ್ರಶ್ನೆಗಳನ್ನು ಯಾವದೊಂದು ವರ್ಷದಲ್ಲಿ ಕೇಳಿದರೆ ಅದೇ ಪ್ರಮಾಣದಿಂದ ಹೆಚ್ಚು ವಯಸ್ಸನ್ನು ಲೆಕ್ಕದಲ್ಲಿ ಹಿಡಿದುಕೊಳ್ಳಬೇಕು.

| | | ವರ್ಷ | ತಿಂಗಳು |
|---|---|---|---|
| ೭ನೆಯ ವರ್ಷದೊಳಗಿನ ಎಲ್ಲ ಪ್ರಶ್ನೆ | .... | ೭ | — |
| ೮ನೆಯ ವರ್ಷದೊಳಗಿನ ೩ ಪ್ರಶ್ನೆ | .... | — | ೬ |
| ೯ನೆಯ ವರ್ಷದೊಳಗಿನ ೨ ಪ್ರಶ್ನೆ | .... | — | ೪ |
| ೧೦ನೆಯ ವರ್ಷದೊಳಗಿನವು ಏನೂ ಇಲ್ಲ | .... | — | — |
| ಅಂತೂ ಮಾನಸಿಕ ವಯಸ್ಸು | | ೭ | ೧೦ |

ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳುವ. ೧೫ ವರ್ಷ ೫ ತಿಂಗಳು ವಯಸ್ಸಿನ ಒಬ್ಬ ಹುಡುಗನು ೧೨ ವರ್ಷದ ಎಲ್ಲ ಪ್ರಶ್ನೆಗಳ ಉತ್ತರಗಳನ್ನು ಸರಿಯಾಗಿ ಹೇಳುತ್ತಾನೆ. ಮತ್ತು ೧೪ನೆಯ ವರ್ಷದ ೫ ಪ್ರಶ್ನೆಗಳ, ೧೬ನೆಯ ವರ್ಷದ ೫ ಪ್ರಶ್ನೆಗಳ, ಮೇಲಿನ ತರಗತಿಯ ಪ್ರೌಢ ವಯಸ್ಸಿನ (೧೯ನೆಯ ವರ್ಷದ ಸದರಿಸಲ್ಲಿ ಬರೆದ) ಪ್ರಶ್ನೆಗಳಲ್ಲಿ ೪ ಪ್ರಶ್ನೆಗಳ, ಹೆಚ್ಚಿನ ತರಗತಿಯ ಪ್ರೌಢ ವಯಸ್ಸಿನವರ (೨೨ನೆಯ ವರ್ಷದವರ) ಪ್ರಶ್ನೆಗಳಲ್ಲಿ ೩ ಪ್ರಶ್ನೆಗಳ ಉತ್ತರಗಳನ್ನು ಸರಿಯಾಗಿ ಕೊಡುತ್ತಾನೆ. ಅವನ ಮಾನಸಿಕ ವಯಸ್ಸಿನ ಲೆಕ್ಕವು ಕೆಳಗೆ ಬರೆದಂತೆ ಆಗುತ್ತದೆ—

| | | | | ವರ್ಷ | ತಿಂಗಳು |
|---|---|---|---|---|---|
| ೧೨ನೆಯ ವರ್ಷದೊಳಗಿನ ಎಲ್ಲ ಪ್ರಶ್ನೆ | | | .... | ೧೨ | — |
| ೧೪ | ,, | ೫ ,, | .... | ೧ | ೮ |
| ೧೬ | ,, | ೫ ,, | .... | ೧ | ೮ |
| ೧೯ | ,, | ೪ ,, | .... | ೨ | — |
| ೨೨ | ,, | ೩ ,, | .... | ೧ | ೬ |
| ಅಂತೂ ಮಾನಸಿಕ ವಯಸ್ಸು | | | | ೧೮ | ೧೦ |

ಮೊದಲನೆಯ ಹುಡುಗನ ವಯಸ್ಸು ೧೦ ವರ್ಷ ೧ ತಿಂಗಳು ಇದೆ. ಆದುದರಿಂದ ಆ ಹುಡುಗನು ೨ ವರ್ಷ ೩ ತಿಂಗಳು ಹಿಂದುಳಿದವನಿರುತ್ತಾನೆ. ಅದರಂತೆಯೇ ಎರಡನೆಯ ಹುಡುಗನ ಮಾನಸಿಕ ವಯಸ್ಸು ೩ ವರ್ಷ ೫ ತಿಂಗಳಿಂದ ಅವನ ನಿಜವಾದ ವಯಸ್ಸಿಗಿಂತಲೂ ಹೆಚ್ಚು ಇದೆ.

**ಬುದ್ಧಿಮಾನವನ್ನು ಗೊತ್ತುಮಾಡುವದು ಮತ್ತು ಅದರ ಮಹತ್ತ್ವ.**—ಬೀನೇಸು ಇಲ್ಲಿಗೇ ನಿಂತಿರುವನು. ಮಾನಸಿಕ ವಯಸ್ಸು

ತೆಗೆದ ಬಳಿಕ ವಿದ್ಯಾರ್ಥಿಯು ಮಧ್ಯಮನು ಇಲ್ಲವೆ ಇಂತಿಷ್ಟು ವರ್ಷ ಹಿಂದುಳಿದಿರುವನು ಇಲ್ಲವೆ ಮುಂದಾಗಿರುವನು ಎಂಬದನ್ನಷ್ಟೇ ಅವನು ಎನ್ನಹತ್ತಿದನು. ಎರಡು ವರ್ಷಕ್ಕಿಂತ ಹೆಚ್ಚು ವರ್ಷಗಳಿಂದ ಹಿಂದುಳಿದವನಿರುವದು ಘಾತುಕವಾಗಿರುವದು ಎಂದು ಅವನು ಅಭಿಪ್ರಾಯ ಕೊಟ್ಟಿರುವನು.

ಹದಿನೈದು ವರ್ಷದ ಹುಡುಗನ ಮಾನಸಿಕ ಬೆಳವಣಿಗೆಯು ೨ ವರ್ಷ ಕಡಿಮೆ ಇರುವದು ಕೆಡಕು ; ಆದರೆ ೧೦ ವರ್ಷದ ಹುಡುಗನ ಮಾನಸಿಕ ಬೆಳವಣಿಗೆಯು ೨ ವರ್ಷ ಕಡಿಮೆ ಇರುವದು ಅದಕ್ಕಿಂತಲೂ ಕೆಡಕು ; ಮತ್ತು ೫ ವರ್ಷದ ಹುಡುಗನ ಮಾನಸಿಕ ಬೆಳವಣಗೆಯು ೨ ವರ್ಷ ಕಡಿಮೆ ಇರುವದು ಅತಿಶಯ ಕೆಡಕು. ಮೇಲಿಂದ ಮೇಲೆ ಬುದ್ಧಿ ಪರೀಕ್ಷೆ ಮಾಡಲು ತಿಳಿಯುವದೇನೆಂದರೆ—೫ ನೆಯ ವರ್ಷದಲ್ಲಿ ೨ ವರ್ಷಗಳಿಂದ ಹಿಂದುಳಿದ ಹುಡುಗನು ೧೦ನೆಯ ವರ್ಷದಲ್ಲಿ ೪ ವರ್ಷಗಳಿಂದ ಮತ್ತು ೧೫ನೆಯ ವರ್ಷದಲ್ಲಿ ೬ ವರ್ಷಗಳಿಂದ ಹಿಂದುಳಿಯುತ್ತಾನೆ. ಈ ಸಂಗತಿಯನ್ನು ಲಕ್ಷ್ಯದಲ್ಲಿತಕ್ಕೊಂಡು ಪ್ರೊ. ಸ್ಟರ್ನ ಎಂಬವನು ಮುಂದೆ ಹೇಳಿರುವದೇನೆಂದರೆ—ನಮಗೆ ಹೆಚ್ಚು ಉಪಯುಕ್ತವಾದ ಸಂಗತಿ ಯಾವದೆಂದರೆ, ಹುಡುಗರ ಮಾನಸಿಕ ವಯಸ್ಸು ಮತ್ತು ನೈಸರ್ಗಿಕ ವಯಸ್ಸು ಇವುಗಳಲ್ಲಿಯ ಪ್ರಮಾಣವನ್ನು ತೆಗೆಯುವದು. ಈ ಪ್ರಮಾಣವು ಸಣ್ಣ ಅಪೂರ್ಣಾಂಕದಲ್ಲಿ ಬರುವದರಿಂದ ಇದಕ್ಕೆ ೧೦೦ರಿಂದ ಗುಣಾಕಾರ ಮಾಡಬೇಕು. ಬಂದ ಸಂಖ್ಯೆಯು ಬುದ್ಧಿಮಾನವೆಂದು ತಿಳಿಯಬೇಕು.

ಉದಾ.—ಬುದ್ಧಿಮಾನ $= \frac{\text{ಮಾನಸಿಕ ವಯಸ್ಸು}}{\text{ನೈಸರ್ಗಿಕ ವಯಸ್ಸು}} \times ೧೦೦$.

ಮೇಲೆ ಕೊಟ್ಟ ೧ನೆಯ ಉದಾಹರಣೆಯಲ್ಲಿ ಹುಡುಗನ ಮಾನಸಿಕ ವಯಸ್ಸು ೭ ವರ್ಷ ೧೦ ತಿಂಗಳು ಇದೆ. ಮತ್ತು ಅವನ ನೈಸರ್ಗಿಕ ವಯಸ್ಸು ೧೦ ವರ್ಷ ೧ ತಿಂಗಳು ಇದೆ. ಆದುದರಿಂದ ಅವನ ಬುದ್ಧಿಮಾನವು $= \frac{\text{ಮಾನಸಿಕ ವಯಸ್ಸು}}{\text{ನೈಸರ್ಗಿಕ ವಯಸ್ಸು}} \times ೧೦೦ = \frac{\text{೯೪ ತಿಂಗಳು}}{\text{೧೨೧ ತಿಂಗಳು}} \times ೧೦೦ = ೭೭.೭$ ಇರುವದು. ಎರಡನೆಯ ಹುಡುಗನ ಬುದ್ಧಿಮಾನವು $= \frac{\text{೨೨೬ ತಿಂಗಳು}}{\text{೧೮೫ ತಿಂಗಳು}} \times ೧೦೦ =$ ೧೨೨.೨. ಎಷ್ಟೋ ಮಾನಸ ಶಾಸ್ತ್ರಜ್ಞರ ಪ್ರಯೋಗಗಳ ಮೇಲಿಂದ

ಹುಡುಗರ ಬುದ್ಧಿಮಾನವು ಆಯುಷ್ಯದಲ್ಲಿ ಸರಾಸರಿ ಅಷ್ಟೇ ಉಳಿಯುವದೆಂದು ಕಂಡುಬರುವದು. ಇದು ನಿಜವಿದ್ದರೆ ಬುದ್ಧಿಪರೀಕ್ಷೆಯು ಯೋಗದಿಂದ ಯಾವದೊಂದು ಮಗು, ಅದರ ಬುದ್ಧಿವಿಕಾಸಕ್ಕೆ ಯೋಗ್ಯ ಅನುಕೂಲತೆ ದೊರೆತರೆ ಮುಂದೆ ಯಾವ ಪ್ರಕಾರದ ಪ್ರೌಢ ಮನುಷ್ಯನು ಆಗುವದು ಇಲ್ಲವೆ ಪ್ರೌಢ ಹೆಂಗಸು ಆಗುವುದೆಂಬುದನ್ನು ಹೇಳಬಹುದು.

**ಬುದ್ಧಿಪರೀಕ್ಷೆಯ ಉಪಯೋಗದ ವಿಷಯದಲ್ಲಿ ನೆನಪಿಡತಕ್ಕ ಮಾತುಗಳು.**—ಮೊದಲನೆಯ ಮಾತು ಏನೆಂದರೆ, ಹುಡುಗನ ಪರೀಕ್ಷೆ ಪೂರ್ಣವಾಗಿ ತೆಗೆದುಕೊಂಡಿದೆ ಎಂದು ನಿರ್ಣಯಿಸಿಕೊಳ್ಳಬೇಕು. ಹೇಗೆಂದರೆ, ಸಾಧಾರಣವಾಗಿ ಪರೀಕ್ಷೆಯು ೪ ಇಲ್ಲವೆ ೫ ವರ್ಷಗಳ ಪ್ರಶ್ನೆಗಳನ್ನು ಕೇಳಿ ಮಾಡಿದರೆ ಸರಿಯಾಗಿ ಆಯಿತೆಂದು ತಿಳಿಯಬಹುದು. ಎಂದರೆ, ೫ ವರ್ಷದ ಪ್ರಶ್ನೆಗಳಿಂದ ಆರಂಭಿಸಿದರೆ ೮ ಇಲ್ಲವೆ ೯ ವರ್ಷದ ಪ್ರಶ್ನೆಗಳ ವರೆಗೆ ಸಾಗಿಸಬೇಕಾಗುವದು. ಯಾವ ವರ್ಷದ ಎಲ್ಲ ಪ್ರಶ್ನೆಗಳ ಉತ್ತರಗಳನ್ನು ಸರಿಯಾಗಿ ಕೊಡಲಿಕ್ಕೆ ಬರುವದೋ ಆ ವರ್ಷದ ಪ್ರಶ್ನೆಗಳಿಂದ ಆರಂಭಿಸಬೇಕು. ಮುಂದಿನ ವರ್ಷದ ಪ್ರಶ್ನೆಗಳಲ್ಲಿ, ಉದಾಹರಣಾರ್ಥವಾಗಿ, ೬ರಲ್ಲಿ ४, ಅದರ ಮುಂದಿನದರಲ್ಲಿ ೬ರಲ್ಲಿ ೨, ಅದಕ್ಕೂ ಮುಂದಿನದರಲ್ಲಿ ೬ರಲ್ಲಿ ೧ ಪ್ರಶ್ನೆಯ ಉತ್ತರವನ್ನು ಕೊಡಬಹುದು ಮತ್ತು ಕಡೆಗೆ ಒಂದೂ ಪ್ರಶ್ನೆಯ ಉತ್ತರವನ್ನು ಕೊಡಲಿಕ್ಕೆ ಬರುವದಿಲ್ಲ. ಪ್ರತ್ಯಕ್ಷವಾಗಿ ಪರೀಕ್ಷೆ ತೆಗೆದುಕೊಳ್ಳುವಾಗ ಪ್ರತಿಯೊಂದು ವರ್ಷದಲ್ಲಿ ಹೆಚ್ಚು ಕಡಿಮೆ ಪ್ರಮಾಣದಿಂದ ಪ್ರಶ್ನೆಗಳ ಉತ್ತರಗಳನ್ನು ಹುಡುಗರು ಕೊಡುವರು. ಆದರೆ ಸಾಧಾರಣವಾಗಿ ಪ್ರಶ್ನೆಗಳ ಉತ್ತರಗಳು ೧೦೦ ಟಕ್ಕೆಯಿಂದ ೦ ಟಕ್ಕೆಯ ವರೆಗೆ ಸಾವಕಾಶವಾಗಿ ಇಳಿಯುತ್ತ ಹೋಗುತ್ತವೆಯೆಂದು ಕಂಡುಬರುವದು. ಹಿಂದುಳಿದ ಬಾಲಕರಲ್ಲಿ ಈ ಇಳಿತರವು ಹೆಚ್ಚು ಕಡಿಮೆ ಆಗಬಹುದು. ಅವರು ಉತ್ತರಗಳನ್ನು ಕೊಡಬಹುದಾದ ಪ್ರಶ್ನೆಗಳ ಸೀಮೆಯು ಕೆಳತುದಿಯ ಮತ್ತು ಮೇಲ್ತುದಿಯ ವಿಶೇಷ ಪ್ರಶ್ನೆಗಳನ್ನು ಆಕ್ರಮಿಸುತ್ತದೆ. ಇದರ ಕಾರಣವು ಬುದ್ಧಿಪರೀಕ್ಷೆಯ ಯಾವ ಪ್ರಶ್ನೆಯಾದರೂ ಕೇವಲ ಬುದ್ಧಿಯನ್ನೇ ಪರೀಕ್ಷಿಸುವಂಥದು ಇರುವದಿಲ್ಲ. ವ್ಯವಹಾರದಲ್ಲಿಯ ಅನುಭವವಾದರೂ ಇಂಥ ಪ್ರಶ್ನೆಗಳಲ್ಲಿ ಸೇರುತ್ತದೆ. ಇದರಿಂದ ಹಿಂದುಳಿದ ಬಾಲಕರಿಗೂ ಕೂಡ ಅವರು ಬುದ್ಧಿಯಲ್ಲಿ ಹಿಂದುಳಿದವರು

ಇದ್ದರೂ ವಯಸ್ಸಿನ ಕೂಡ ಅನುಭವವೂ ದೊರೆಯುತ್ತಿರುತ್ತದೆ. ವ್ಯವಹಾರದಲ್ಲಿಯ ಅನುಭವದೊಳಗಿಂದ ಹೊಸ ಮಾತುಗಳನ್ನು ಕಲಿಯುವದಕ್ಕೂ ಕೂಡ ಬುದ್ಧಿಯು ಬೇಕಾಗುತ್ತದೆ. ಒಂದೇ ಪರಿಸ್ಥಿತಿಯಲ್ಲಿ ಹಿಂದುಳಿದ ಬಾಲಕನಿಗಿಂತ ಜಾಣನಾದ ಬಾಲಕನು ಹೆಚ್ಚು ಸಂಗತಿಗಳನ್ನು ಕಲಿಯಬಲ್ಲನು. ಆದರೆ ಅಷ್ಟೇ ಮಾನಸಿಕ ವಯದ ಇಬ್ಬರು ಬಾಲಕರನ್ನು ತೆಗೆದುಕೊಂಡರೆ ಜಾಣ ಹುಡುಗನಿಗಿಂತ ಹಿಂದುಳಿದ ಹುಡುಗನಿಗೆ ಹೆಚ್ಚು ಅನುಭವವಿದ್ದರೆ ಅವನ ಉತ್ತರಗಳಲ್ಲಿ ಹೆಚ್ಚು ವಿಷಮತೆಯು ಉಂಟಾಗುವದು. ಉದಾಹರಣೆಗಾಗಿ, ನಾಣ್ಯಗಳನ್ನು ಗುರುತಿಸುವ ಪರೀಕ್ಷೆಯಲ್ಲಿ ಒಬ್ಬ ಬಾಲಕನು ಆ ವಯದ ಉತ್ತರಗಳನ್ನು ಕೊಡುವಷ್ಟು ಮಾನಸಿಕ ವಯಸ್ಸು ಇಲ್ಲದಿದ್ದರೂ ಕೇವಲ ನಾಣ್ಯಗಳನ್ನು ಬಳಸುವ ಸಂಧಿಯು ಹೆಚ್ಚಿಗೆ ದೊರೆತದ್ದರಿಂದ ಪಾಸು ಆಗಬಲ್ಲನು. ಉತ್ತರಗಳನ್ನು ಕೊಡುವಾಗ ಭಾವನೆಯ ಪರಿಣಾಮವಾದರೂ ವಿಶೇಷವಾಗಿ ಆಗುತ್ತದೆಂದು ಹಿಂದೆ ಹೇಳಿದೆ. ಯಾವನೊಬ್ಬ ಬಾಲಕನು ನಾಚುವವ, ಗಾಬರಿಯಾಗುವವ, ಅಂಜುಬುರುಕ ಇದ್ದರೆ ಅವನಿಗೆ ಯೋಗ್ಯವಾದಷ್ಟು ಗುಣಗಳು ಸಿಗಲಾರವು. ಆದುದರಿಂದ ಬೌದ್ಧಿಕ ಪರೀಕ್ಷೆಯ ನಿರ್ಣಯದೊಂದಿಗೆ ಅವನ ವಿಷಯವಾಗಿ ಶಿಕ್ಷಕನ ಮತ ಅಥವಾ ಶಾಲೆಯಲ್ಲಿ ಅವನ ಪ್ರಗತಿ—ಇವುಗಳ ತುಲನೆಮಾಡಿನೋಡಬೇಕು. ನೂರರಲ್ಲಿ ಒಬ್ಬ ಬಾಲಕನ ವಿಷಯವಾಗಿಯೂ ಕೂಡ ಬುದ್ಧಿಪರೀಕ್ಷೆಯ ನಿರ್ಣಯವು ಅವನ ನಿಜವಾದ ಬುದ್ಧಿಗೆ ವಿಸಂಗತವಾದದ್ದು ಕಂಡುಬರುವದಿಲ್ಲ. ತೀರ ಸಣ್ಣ ಬಾಲಕನ ಬುದ್ಧಿಯ ಪರೀಕ್ಷೆಯ ಪರಿಣಾಮವು ತೀರ ನಿಜವೇ ಇರುತ್ತದೆಂದು ತಿಳಿಯಬೇಕಾದರೆ ಸ್ವಲ್ಪ ಹಿಂದು ಮುಂದು ನೋಡಬೇಕಾಗುತ್ತದೆ. ಇಂಥ ಹುಡುಗರೆಂದರೆ ೪ ಅಥವಾ ೫ ವರ್ಷದ ವಯದ ಕೆಳಗಿನ ಹುಡುಗರು. ಇವರು ಬಹಳ ನಾಚುವವರು ಅಥವಾ ಹಟಮಾರಿಗಳು ಇರುತ್ತಾರೆ. ಆದುದರಿಂದ ಇವರು ಸರಿಯಾಗಿ ಉತ್ತರಗಳನ್ನು ಕೊಡುವದಿಲ್ಲ. ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡಲಿಕ್ಕೆ ಅವರಿಗೆ ಬರುವದಿಲ್ಲವೋ ಅಥವಾ ಅವರಿಗೆ ಉತ್ತರ ಕೊಡುವ ಇಚ್ಛೆ ಇರುವದಿಲ್ಲವೋ ಎಂಬದು ತಿಳಿಯುವದು ಬಹಳ ಕಠಿಣವಿರುತ್ತದೆ. ಆದುದರಿಂದ ಈ ಹುಡುಗರ ಮತ್ತು ಇವರ ಓರಿಗೆಯ ಉಳಿದ ಬಾಲಕರ ಗುರುತು ಇರುವ ಜನರ ತುಲ

ನಾತ್ಮಕ ಅಭಿಪ್ರಾಯವನ್ನು ತೆಗೆದುಕೊಳ್ಳುವದು ಅವಶ್ಯವಿರುತ್ತದೆ. ಅದೇ ಹುಡುಗನ ಪರೀಕ್ಷೆಯನ್ನು ೨ ವರ್ಷದ ತರುವಾಯ ಮತ್ತೆ ತೆಗೆದುಕೊಂಡು ಹಳೆಯ ಮತ್ತು ಹೊಸ ಅನುಮಾನಗಳನ್ನು ಒಂದಕ್ಕೊಂದು ಸರಿಹಚ್ಚಿ ನೋಡುವದು ಬೋಧಪ್ರದವಾಗಿರುತ್ತದೆ. ತಾಯಿತಂದೆಗಳ ಅಭಿಪ್ರಾಯವು ಯಾವಾಗಲೂ ವಿಶ್ವಸನೀಯವಿರುವದಿಲ್ಲ. ಬಹುತರವಾಗಿ ಬಾಲಕನ ವಿಷಯವಾಗಿ ಅವನ ತಾಯಿತಂದೆಗಳ ಮತವು ಬಹಳ ಒಳ್ಳೆಯದು ಇರುವದು. ಮತ್ತು ಅವರು ಹಲವೆಡೆಯಲ್ಲಿ ಅವನ ಮೂರ್ಖತನದ ಉತ್ತರಗಳಿಂದ ಕೌತುಕಪಡುವರು. ಮತ್ತು ಇಲ್ಲದ ಅರ್ಥವನ್ನು ಆ ಉತ್ತರದಿಂದ ಹೊರಡಿಸುವರು.

**ಪ್ರೌಢ ಜನರ ಬುದ್ಧಿಮಾನವು.**—ಬುದ್ಧಿಮಾನದ ಪರೀಕ್ಷೆಯ ಮೇಲಿಂದ ಇಂಥ ಪರೀಕ್ಷೆಯಿಂದ ಗೊತ್ತುಪಡಿಸಿದ ಬುದ್ಧಿಯು ಒಬ್ಬ ಮನುಷ್ಯನು ೧೬ ವರ್ಷದವನು ಆದಮೇಲೆ ಬೆಳೆಯುವದಿಲ್ಲೆಂದು ಕಂಡು ಬರುತ್ತದೆ. ಉದಾಹರಣೆಗಾಗಿ, ಸ್ಕೇಲಿನೊಳಗಿನ ಮುಂದು ಮುಂದಿನ ಪ್ರಶ್ನೆಗಳಲ್ಲಿ ಪಾಸಾಗುವ ಹುಡುಗರ ನೂರಕ್ಕೆ ಪ್ರಮಾಣವು ೧೬ ವರ್ಷಗಳ ವರೆಗೆ ಬೆಳೆಯುತ್ತ ಹೋಗುತ್ತದೆ. ಇದರ ಮುಂದೆ ಪ್ರಮಾಣವು ವಿಶೇಷವಾಗಿ ಬೆಳೆದದ್ದು ಕಂಡುಬರುವದಿಲ್ಲ. ಕೆಲವು ಪರೀಕ್ಷಕರ, ವಿಶೇಷವಾಗಿ ಸಾಮೂಹಿಕ ಪ್ರಶ್ನೆಗಳಿಂದ ಪರೀಕ್ಷೆ ತೆಗೆದುಕೊಳ್ಳುವವರ, ಮತದಿಂದ ಈ ಬೆಳವಣಿಗೆಯು ೧೪ ವರ್ಷಗಳ ವರೆಗೆಂದೂ ಮತ್ತು ಕೆಲವರ ಮತದಿಂದ ೧೮ ವರ್ಷಗಳ ವರೆಗೆಂದೂ ಇರುತ್ತದೆ. ಆದರೂ ಸಾಮಾನ್ಯವಾಗಿ ೧೬ ವರ್ಷವು ಬುದ್ಧಿಬೆಳವಣಿಗೆಯ ಮರ್ಯಾದೆಯೆಂದು ತಿಳಿಯಲ್ಪಡುತ್ತದೆ. ಈ ಮರ್ಯಾದೆಯನ್ನು ನಾವು ನಿಜವೆಂದು ಗ್ರಹಿಸಿದರೆ, ಪ್ರೌಢಮನುಷ್ಯನು ಎಷ್ಟು ವರ್ಷದವನಿದ್ದರೂ ಅವನ ವಯಸ್ಸು ೧೬ ವರ್ಷವೆಂದು ನಾವು ತಿಳಿಯಬೇಕಾಗುತ್ತದೆ. ಮತ್ತು ಅವನ ಬೌದ್ಧಿಕ ವಯಸ್ಸನ್ನು ೧೬ ವರ್ಷದಿಂದ ಭಾಗಿಸಿ, ಅವನ ಬುದ್ಧಿಮಾನವನ್ನು ತೆಗೆಯಬೇಕಾಗುತ್ತದೆ. ಹೇಗೆಂದರೆ—ಯಾವನೊಬ್ಬ ಮನುಷ್ಯನ ವಯಸ್ಸು ೨೫ ವರ್ಷ ಮತ್ತು ಬೌದ್ಧಿಕ ವಯಸ್ಸು ೧೮ ಇದ್ದರೆ, ಅವನ ಬುದ್ಧಿಮಾನವು =

$\frac{೧೮}{೧೬} \times ೧೦೦ = ೧೨೨.೫$ ಇಷ್ಟು ಬರುವದು.

**ವೈಕಲ್ಪಿಕ ಪ್ರಶ್ನೆಗಳು.**—ಕೆಲವು ಕಾರಣಗಳಿಂದ ಮುಖ್ಯಪ್ರಶ್ನೆಯನ್ನು ಕೇಳಲಿಕ್ಕೆ ಬಾರದಿದ್ದರೆ ವೈಕಲ್ಪಿಕ ಪ್ರಶ್ನೆಗಳನ್ನು ಉಪಯೋಗಿಸಿಕೊಳ್ಳಬೇಕು. ಆದರೆ ಮುಖ್ಯಪ್ರಶ್ನೆಗಳಷ್ಟು ಇವು ವಿಶ್ವಸನೀಯವಲ್ಲ. ಶಬ್ದಕೋಶದ ಪ್ರಶ್ನೆಯು ಒಳ್ಳೆಯದಿದ್ದರೂ ಆದರ ಉಪಯೋಗವನ್ನು ಒಂದೇ ವರ್ಷದಲ್ಲಿ ಎಂದರೆ ಎಲ್ಲಕ್ಕೂ ಹೆಚ್ಚು ವಯಸ್ಸಿನ ಪ್ರಶ್ನೆಮಾಲಿಕೆಯಲ್ಲಿ ಮಾಡಬೇಕು. ಏಕೆಂದರೆ, ಯಾವದಾದರೊಂದು ಜಾತಿಯ ಪ್ರಶ್ನೆಯ ಉಪಯೋಗವನ್ನು ಒಮ್ಮೆ ಮಾತ್ರ ಮಾಡಬೇಕೆಂದು ನಮ್ಮ ತತ್ತ್ವವಿರುತ್ತದೆ. ಮಾತೃಭಾಷೆಯೂ ಶಾಲೆಯಲ್ಲಿರುವ ಭಾಷೆಯೂ ಒಂದೇ ಇರುವಂಥ ಹುಡುಗರ ವಿಷಯದಲ್ಲಿಯೇ ಈ ಪ್ರಶ್ನೆಯ ಉಪಯೋಗವನ್ನು ಮಾಡಬೇಕು. ಇದರಿಂದ ಈ ಪ್ರಶ್ನೆಯ ಉಪಯೋಗವು ಸ್ವಲ್ಪ ಮರ್ಯಾದಿತವಾಗುತ್ತದೆ. ಮಾತೃಭಾಷೆಯು ಮರಾಠಿಯಾಗಿಯೂ ಶಾಲೆಯಲ್ಲಿರುವ ಭಾಷೆಯು ಕನ್ನಡವಾಗಿಯೂ ಇರುವ ಹುಡುಗನ ಶಬ್ದಕೋಶದ ತುಲನೆಯನ್ನು ಜನ್ಮಭಾಷೆಯೂ ಶಾಲೆಯ ಭಾಷೆಯೂ ಒಂದೇ ಇರುವ ಹುಡುಗರ ಶಬ್ದಕೋಶದೊಡನೆ ಮಾಡುವದು ಸರಿಯಾಗಲಿಕ್ಕಿಲ್ಲ. ಆದುದರಿಂದ ಶಾಲೆಯಲ್ಲಿಯ ಭಾಷೆಯೂ ಮಾತೃಭಾಷೆಯೂ ಒಂದೇ ಇದ್ದ ಹುಡುಗರನ್ನಷ್ಟೇ ಪರೀಕ್ಷಿಸಿ ಶಬ್ದಕೋಶದ ಪ್ರಶ್ನೆಯು ರಚಿಸಲ್ಪಟ್ಟಿದೆ.

## ವರ್ಷ ೩

**ಪ್ರಶ್ನೆ ೧.**—ಶರೀರದ ಭಾಗಗಳನ್ನು ತೋರಿಸುವದು (೪ರೊಳಗೆ ೩).

"ನಿನ್ನ ಮೂಗು ತೋರಿಸು, ನೋಡೋಣ."

"ನಿನ್ನ ಮೂಗಿನ ಮೇಲೆ ಬೆರಳು (ಬೊಟ್ಟು) ಇಡು, ನೋಡೋಣ."

ಇದೇ ಪ್ರಕಾರ ಕಣ್ಣು, ಬಾಯಿ ಮತ್ತು ಕೂದಲು—ಇವುಗಳ ವಿಷಯಕ್ಕೆ ಕೇಳಬೇಕು.

ಮೇಲಿನ ಪ್ರಶ್ನೆಗಳನ್ನು ಎರಡು-ಮೂರು ಸಾರಿ ಕೇಳಿದರೂ ಉತ್ತರ ಬಾರದಿದ್ದರೆ ಹುಡುಗನ ಅಥವಾ ಹುಡುಗಿಯ ಗದ್ದದ ಅಥವಾ ಕಿವಿಯ ಕಡೆಗೆ ಬೆರಳು ಮಾಡಿ ಕೆಳಗಿನ ಪ್ರಶ್ನೆಗಳನ್ನು ಕೇಳಬೇಕು—

"ಇದು ನಿನ್ನ ಮೂಗೇನು?"

"ಅಲ್ಲ?" "ಹಾಗಾದರೆ ನಿನ್ನ ಮೂಗು ಎಲ್ಲಿ?"

ಶಬ್ದಗಳಿಂದ ಉತ್ತರವನ್ನು ಕೊಡದೆ ಕಣ್ಣು ಮುಚ್ಚಿ, ಬಾಯಿ ತೆರೆದು ಅಥವಾ ಬೇರೆ ರೀತಿಯಿಂದ ಉತ್ತರವನ್ನು ಕೊಟ್ಟರೆ, ಅದು ಸಮ ಎಂದು ತಿಳಿಯಬೇಕು.

**ಪ್ರಶ್ನೆ ೨.**—ಬಳಕೆಯಲ್ಲಿದ್ದ ಪದಾರ್ಥಗಳನ್ನು ತೋರಿಸುವದು (೫ರೊಳಗೆ ೩).

೧. ಕೀಲಿಕೈ; ೨. ಜಲ್ಲಿ; ೩. ಮುಚ್ಚಿದ ಚಾಕು; ೪. ಘಡಿಯಾಳ (ವಾಚ್); ೫. ಸಾದಾ ಸೀಸ ಪೆನ್ಸಿಲು—ಇವುಗಳನ್ನು ತೋರಿಸಬೇಕು.

ಇವು ಯಾವಾಗಲೂ ಬಳಕೆಯೊಳಗಿನವು ಇರಬೇಕು.

"ಇದು ಏನು?" ಅಥವಾ "ಇದಕ್ಕೆ ಏನು ಅನ್ನುತ್ತಾರೆ, ಹೇಳು, ನೋಡೋಣ."

**ಪ್ರಶ್ನೆ ೩.**—ಎರಡು ಅಂಕೆಗಳನ್ನು ತಿರುಗಿ ಅನ್ನುವದು (೩ರಲ್ಲಿ ೧. ಕ್ರಮವು ಸಮ. ಅರ್ಧ ಸೆಕಂಡಿಗೆ ಒಂದರಂತೆ ಓದಬೇಕು).

"ಕೇಳು. ಹೀಗೆ ಅನ್ನು:— ೪—೭" (ಅಭ್ಯಾಸಕ್ಕಾಗಿ).

"ಈಗ ಹೀಗೆ ಅನ್ನು:— ೩—೭; ೬—೪; ೭—೨."

**ಪ್ರಶ್ನೆ ೪.**—ಚಿತ್ರದೊಳಗಿನ ವಸ್ತುಗಳ ಹೆಸರುಗಳನ್ನು ಹೇಳುವದು (ಯಾವದಾದರೂ ಒಂದು ಚಿತ್ರದೊಳಗಿನ ಎರಡು ವಸ್ತುಗಳನ್ನಾದರೂ ಹೇಳಬೇಕು).

(ಅ) ರೇಲ್ವೆ ಸ್ಟೇಷನ್.

(ಬ) ಮನೆಗೆ ಬಂದವರ ಸತ್ಕಾರ.

(ಕ) ಮೋಟರಿನ ಅಪಘಾತ.

"ನಾನು ಈಗ ನಿನಗೆ ಒಂದು ಸುಂದರವಾದ ಚಿತ್ರವನ್ನು ತೋರಿಸುತ್ತೇನೆ."

"ಈ ಚಿತ್ರದೊಳಗೆ ಏನು ಕಾಣಿಸುತ್ತದೆ, ಹೇಳು."

"ಈ ಚಿತ್ರದಲ್ಲಿ ನೋಡು ಮತ್ತು ಏನೇನು ನಿನಗೆ ಅದರಲ್ಲಿ ಕಾಣಿಸುತ್ತದೆ, ಹೇಳು."

"ನನಗೆ . . . . ತೋರಿಸು" (ಇಂಥ ಒಂದೇ ಪ್ರಶ್ನೆ ಕೇಳಬಹುದು).

"ಶಾಬಾಸ, ಈಗ ಈ ಚಿತ್ರದಲ್ಲಿ ಏನೇನು ಕಾಣಿಸುತ್ತದೆ? ಅದನ್ನೆಲ್ಲ ಹೇಳು."

"ಮತ್ತೇನು?"

**ಪ್ರಶ್ನೆ ೫.**—ಆರು-ಏಳು ಅಕ್ಷರಗಳನ್ನು ತಿರುಗಿ ಅನ್ನುವದು (೩ರಲ್ಲಿ ೧).

ಅಭ್ಯಾಸಕ್ಕಾಗಿ—

೧. "'ಅನ್ನ' ಅನ್ನು ನೋಡೋಣ."

೨. "ಈಗ 'ಮಾಟಾದ ಬೆಕ್ಕು' ಅನ್ನು ನೋಡೋಣ."

"ಈಗ ಹೀಗೆ ಅನ್ನು :—

(ಅ) 'ಇಗೋ, ನಾಯಿ ನೋಡು.'

(ಬ) 'ಬೆಕ್ಕೇ, ಹಾಲು ಕುಡಿ.'

(ಕ) 'ಈಗ ಸೆಕೆ ಬಹಳ.'"

**ಪ್ರಶ್ನೆ ೬.**—ಸರಳ ರೇಖೆಗಳ ತುಲನೆಯನ್ನು ಮಾಡುವದು (೩ರಲ್ಲಿ ೩ ಅಥವಾ ೬ರಲ್ಲಿ ೫).

ರೇಖೆಗಳು ಅಡ್ಡ ಆಗುವ ಹಾಗೆ ಕಾರ್ಡನ್ನು ಹುಡುಗನ ಎದುರಿಗೆ ಇಡಬೇಕು.

" ಇಲ್ಲಿ ಎರಡು ಗೆರೆಗಳು ಅವೆ. ಇದು ಒಂದು ಮತ್ತು ಇದು ಒಂದು. ಲಕ್ಷ್ಯಗೊಟ್ಟು ನೋಡಿ ಇವುಗಳಲ್ಲಿ ಉದ್ದವಾದದ್ದು ಯಾವದು, ಹೇಳು. ಉದ್ದವಿದ್ದ ಗೆರೆಯಮೇಲೆ ಬೆರಳನ್ನಿಡು."

ಬಳಿಕ ಗೆರೆಗಳ ಜಾಗೆಗಳನ್ನು ತಿರುವು ಮುರುವು ಮಾಡಬೇಕು.

" ಈಗ ಯಾವದು ಉದ್ದವಾದದ್ದು ?"

ಮತ್ತೆ ಕಾರ್ಡನ್ನು ತಿರುಗಿಸಿ ಇದೇ ಪ್ರಕಾರ ಮೂರನೆಯ ಸಾರಿ ಅದೇ ಪ್ರಶ್ನೆಯನ್ನು ಕೇಳಬೇಕು.

**ವೈಕಲ್ಪಿಕ ಪ್ರಶ್ನೆ ೧.**—ಲಿಂಗಭೇದವನ್ನು ತಿಳಕೊಳ್ಳುವದು.

ಹುಡುಗನಿಗೆ—" ನೀನು ಹುಡುಗನೋ ಹುಡುಗಿಯೋ ? "

ಹುಡುಗಿಗೆ—" ನೀನು ಹುಡುಗಿಯೋ ಹುಡುಗನೋ?"

ಉತ್ತರ ಬಾರದಿದ್ದರೆ, ಹುಡುಗನಿಗೆ—" ನೀನು ಹುಡುಗಿಯೇನು ?" ಹುಡುಗಿಗೆ—" ನೀನು ಹುಡುಗನೇನು ?"

" ಒಳ್ಳೇದು, ನೀನು ಏನಿದ್ದೀ? ನೀನು ಹುಡುಗನೋ ಹುಡುಗಿಯೋ ?" (ಅಥವಾ ಇದರ ವಿರುದ್ಧವಾಗಿ).

**ವೈಕಲ್ಪಿಕ ಪ್ರಶ್ನೆ ೨.**—ತನ್ನ ಹೆಸರು ಹೇಳುವದು.

" ನಿನ್ನ ಹೆಸರೇನು ?"

" ನಿನಗೆ ಏನು ಎಂತ ಕರೆಯುತ್ತಾರೆ ?"

## ವರ್ಷ ೪

**ಪ್ರಶ್ನೆ ೧.**—ಮೂರು ಅಂಕೆಗಳನ್ನು ತಿರುಗಿ ಅನ್ನುವದು (೩ರಲ್ಲಿ ೧. ಕ್ರಮವು ಸಮ. ಅರ್ಧ ಸೆಕಂಡಿಗೆ ಒಂದರಂತೆ ಓದಬೇಕು).

"ಕೇಳು. ಹೀಗೆ ಅನ್ನು: '೨—೩.'" (ಅಭ್ಯಾಸಕ್ಕಾಗಿ).

"ಈಗ ಹೀಗೆ ಅನ್ನು: '೬—೪—೧ ; ೩—೫—೨ ; ೮—೩—೭.'"

**ಪ್ರಶ್ನೆ ೨.**—ಆಕೃತಿಗಳ ಹೆಚ್ಚು ಕಡಿಮೆಯನ್ನು ತಿಳಕೊಳ್ಳುವದು (ಕೂಲ ಮನ್. ೧೦ರಲ್ಲಿ ೭).

ಪರೀಕ್ಷಾ ಕಾರ್ಡುಗಳ ಪಾಕೀಟಿನೊಳಗಿನ ಭೂಮಿತಿಯ ಆಕೃತಿಗಳ ಡಬಲ್ ಸೆಟ್ಟನ್ನು ಉಪಯೋಗಿಸಬೇಕು. ಇವುಗಳಲ್ಲಿ ಒಂದು ಕಾರ್ಡನ್ನು ಕತ್ತರಿಸಿ, ಆಕೃತಿಗಳನ್ನು ಬೇರೆ ಬೇರೆ ಮಾಡಿ ಇಟ್ಟುಕೊಳ್ಳಬೇಕು.

ಕತ್ತರಿಸದೆ ಇದ್ದ ಕಾರ್ಡನ್ನು ಹುಡುಗನ ಎದುರಿಗೆ ಇಟ್ಟು, ಕತ್ತರಿಸಿ ಇಟ್ಟ ವರ್ತುಲದ ತುಂಡನ್ನು ಕತ್ತರಿಸದೆ ಇದ್ದ ಕಾರ್ಡಿನ ಮೇಲೆ × ಗುರುತು ಇದ್ದಲ್ಲಿ ಇಡಬೇಕು ; ಮತ್ತು ಹೀಗೆ ಅನ್ನಬೇಕು—

"ಇದರ ಹಾಗೆಯೇ ಇದ್ದಂಥ ಆಕೃತಿಯನ್ನು ತೋರಿಸು." ಅದೇ ವೇಳೆಗೆ ವರ್ತುಳದ ಪರಿಘದ ಗುಂಟ ಬೆರಳನ್ನು ತಿರುಗಿಸಬೇಕು.

"ಇವೆಲ್ಲ ಆಕೃತಿಗಳನ್ನು ನೋಡು." (ಒಂದಾದ ಬಳಿಕ ಇನ್ನೊಂದು ಆಕೃತಿಯ ಮೇಲೆ ಬೆರಳನ್ನು ಆಡಿಸುತ್ತ)—"ಮತ್ತು ಈ ಆಕೃತಿಯನ್ನು ನೋಡು. ಈಗ ಇಂಥದೇ ಇನ್ನೊಂದು ಆಕೃತಿಯನ್ನು ತೋರಿಸು."

ಇದಾದ ಬಳಿಕ ಚೌಕೋಣವನ್ನು, ಆ ಬಳಿಕ ತ್ರಿಕೋಣವನ್ನು ಮತ್ತು ಕೊನೆಗೆ ಉಳಿದ ಆಕೃತಿಗಳನ್ನು ಬೇಕಾದ ಕ್ರಮದಿಂದ ತೋರಿಸಬಹುದು.

ಮೊದಲನೆಯ ತಪ್ಪು ಆದಾಗ—"ಅಲ್ಲ, ತೀರ ಇದರಂಥದೇ ಆಕೃತಿಯನ್ನು ತೋರಿಸು" ಎಂದು ಅನ್ನಬೇಕು.

**ಪ್ರಶ್ನೆ ೩.**—ಗ್ರಹಿಸುವದು—ಮೊದಲನೆಯ ತರಗತಿ (೩ರಲ್ಲಿ ೨).

(ಅ) "ನಿನಗೆ ನಿದ್ದೆ ಬಂದರೆ ನೀನು ಏನು ಮಾಡುವಿ? (ಮಾಡಬೇಕು?)"

(ಬ) "ನಿನಗೆ ಚಳಿ (ಥಂಡಿ) ಹತ್ತಿದರೆ ನೀನು ಏನು ಮಾಡುವಿ? (ಮಾಡಬೇಕು?)"

(ಕ) "ನಿನಗೆ ಹಸಿವೆ ಆದರೆ (ನಿನ್ನ ಹೊಟ್ಟೆ ಹಸಿದರೆ) ನೀನು ಏನು ಮಾಡುವಿ? (ಮಾಡಬೇಕು?)"

ಉತ್ತರ ಬರಲಿಕ್ಕೆ ಸುಮಾರು ೨೦ ಸೆಕಂಡು ಬಿಟ್ಟು ಈ ಪ್ರಶ್ನೆಗಳನ್ನು ತಿರುಗಿ ಎರಡು-ಮೂರು ಸಾರಿ ಕೇಳಬಹುದು. ಈ ವಯಸ್ಸಿನ ಹುಡುಗರ ಚಿತ್ತವನ್ನು ಆಕರ್ಷಿಸಿಕೊಳ್ಳುವದು ಅತಿಶಯ ಕಠಿಣವಾದ ಮಾತು. ಆದುದರಿಂದ ಈ ಪ್ರಶ್ನೆಗಳನ್ನು ತಿರುಗಿ ತಿರುಗಿ ಕೇಳುವುದು ಅನಿವಾರ್ಯವು. ತಿರುಗಿ ಕೇಳುವ ಮುಂದೆ ಪ್ರಶ್ನೆಗಳ ಭಾಷೆಯನ್ನು ಮೇಲೆ ಕಂಸಿನೊಳಗೆ ತೋರಿಸಿದ ಹಾಗೆ ಬದಲಿಸಲಿಕ್ಕೆ ಅಡ್ಡಿ ಇಲ್ಲ.

**ಪ್ರಶ್ನೆ ೪.**—೧೨ರಿಂದ ೧೩ ಅಕ್ಷರಗಳನ್ನು ಮತ್ತೆ ಅನ್ನುವದು (೩ರಲ್ಲಿ ತೀರ ಸರಿಯಾದ ೧, ಅಥವಾ ಒಂದೊಂದು ತಪ್ಪುಮಾಡಿದ ೨).

"ಕೇಳು, ಹೀಗೆ ಅನ್ನು—'ರಾಮನು ಎಲ್ಲಿ ಇದ್ದಾನೆ?'" (ಅಭ್ಯಾಸಕ್ಕಾಗಿ ಮಾತ್ರ).

"ಈಗ ಹೀಗೆ ಅನ್ನು—

(ಅ) 'ರಾಮನ ತಂದೆಯು ಹೆಸರು ಗೋವಿಂದ.'

(ಬ) 'ಉಗೆಬಂಡಿ ಹೊರಡುವಾಗ ಕೂಗುತ್ತದೆ.'

(ಕ) 'ಹಳ್ಳಿಯೊಳಗೆ ಸುಖದಿಂದ ಇರುತ್ತೇವೆ.'"

**ಪ್ರಶ್ನೆ ೫.**—ನಾಲ್ಕು ಬಿಲ್ಲಿಗಳನ್ನು ಎಣಿಸುವದು.

ಬಿಲ್ಲಿಗಳನ್ನು ಹುಡುಗನ ಎದುರಿಗೆ ಟೇಬಲಿನ ಮೇಲೆ ಅಡ್ಡಸಾಲಿನಲ್ಲಿ ಇಡಬೇಕು.

"ಈ ಬಿಲ್ಲಿಗಳನ್ನು ನೋಡು. ಇವನ್ನು ಎಣಿಸಿ ಎಷ್ಟು ಅವೆ, ಹೇಳು. ನಿನ್ನ ಬೆರಳಿನಿಂದ ಹೀಗೆ ಎಣಿಸು."

"ಒಂದು . . . . ಈಗ ನಾಗಲಿ."

"ಹೀಗೆ ಅಲ್ಲ, ನಿನ್ನ ಬೆರಳಿನಿಂದ ಹೀಗೆ ಎಣಿಸು."

ಎಣಿಸುವದು ಮತ್ತು ಬೆರಳಿನಿಂದ ತೋರಿಸುವದು ಕೂಡಿದರೆ ಈ ಪರೀಕ್ಷೆಯಲ್ಲಿ ಪಾಸಾದನೆಂದು ತಿಳಿಯಬೇಕು.

ಕಡೆಗೆ ಹೀಗೆ ಕೇಳಬೇಕು—"ಎಷ್ಟು ಅವೆ?"

**ಪ್ರಶ್ನೆ ೬.**—ಚೌಕೋಣದ ನಕಲನ್ನು ಮಾಡುವದು (೩ರಲ್ಲಿ ೧. ಸೀಸ ಪೇನಸಿಲಿನಿಂದ).

ಅಚ್ಚು ಹಾಕಿದ ಚೌಕೋಣದ ನಕಲನ್ನು ಹುಡುಗನ ಎದುರಿಗೆ ಇಟ್ಟು ಹೀಗೆ ಅನ್ನಬೇಕು—

"ಇಲ್ಲಿ ನೋಡು" (ಚೌಕೋಣವನ್ನು ತೋರಿಸಿ).

"ಇದರಂತೆಯೇ ಇಲ್ಲಿ ತೆಗೆ, ನೋಡೋಣ. ಸರಿಯಾಗಿ ಇಲ್ಲಿ ತೆಗೆ" (ಎಲ್ಲಿ ತೆಗೆಯಬೇಕೆಂಬುದನ್ನು ತೋರಿಸಿ). "ಸಾಗಲಿ, ನೀನು ಉತ್ತಮವಾಗಿ ತೆಗೆಯುತ್ತಿ ಎಂಬದನ್ನು ನಾನು ಬಲ್ಲೆ."

ಬೆರಳನ್ನು ಚೌಕೋಣದ ನಾಲ್ಕೂ ಭುಜಗಳ ಮೇಲೆ ಆಡಿಸಬಾರದು.

ಮೂರು ಸಾರಿ ತೆಗಿಸಬೇಕು. "ತೀರ ಇದರ ಹಾಗೆಯೇ ತೆಗಿ" ಎಂದು ಪ್ರತಿ ಸಾರಿ ಹೇಳಬೇಕು.

ಹುಡುಗನು ಮೂರೂ ಆಕೃತಿಗಳನ್ನು ತೆಗೆದ ಮೇಲೆ—"ಇವುಗಳಲ್ಲಿ ನಿನಗೆ ಯಾವದು ಉತ್ತಮ ಕಾಣುತ್ತದೆ?" ಎಂದು ಕೇಳಬೇಕು.

**ವೈಕಲ್ಪಿಕ ಪ್ರಶ್ನೆ.**—ತೂಕಗಳನ್ನು ಹೋಲಿಸುವದು. (೩ರಲ್ಲಿ ೩ ಅಥವಾ ೫ರಲ್ಲಿ ೪).

ಮೂರು ಗ್ರ್ಯಾಮ ಮತ್ತು ೧೫ ಗ್ರ್ಯಾಮ ತೂಕದ ಪೆಟ್ಟಿಗೆಗಳನ್ನು ಉಪಯೋಗಿಸಬೇಕು; ಮತ್ತು ಪರೀಕ್ಷೆಯ ಕಾಲದಲ್ಲಿ ಅವುಗಳನ್ನು ಕೆಳಗಿನ ಕ್ರಮದಲ್ಲಿ ಹುಡುಗನ ಎದುರಿಗೆ ಇಡಬೇಕು:— ೩—೧೫; ೧೫—೩; ೩—೧೫; ೧೫—೩; ೩—೧೫.

"ಈ ಎರಡು ಪೆಟ್ಟಿಗೆಗಳನ್ನು ನೋಡು. ಇವೆರಡೂ ಒಂದೇ ಸವನೆ ಕಾಣಿಸುತ್ತವೆ. ಆದರೆ ಇವುಗಳಲ್ಲಿ ಒಂದು ಜಡವದೆ; ಮತ್ತು ಒಂದು ಹಗುರಾಗಿದೆ. ಇವೆರಡನ್ನೂ ಪರೀಕ್ಷಿಸಿ ನೋಡಿ ಯಾವದು ಹೆಚ್ಚಿಗೆ ಜಡವದೆ, ಹೇಳು."

ಹುಡುಗನು ಏನು ಮಾಡಬೇಕೆಂದು ತಿಳಿಯದೆ ಯಾವದಾದರೊಂದು ಪೆಟ್ಟಿಗೆಯನ್ನು ವಿಚಾರಮಾಡದೆ ಎತ್ತಿಕೊಡಲಿಕ್ಕೆ ಹತ್ತಿದರೆ ಹೀಗೆ ಅನ್ನಬೇಕು—

"ಅಲ್ಲ, ಹೀಗೆ ಅಲ್ಲ. ನೀನು ಈ ವಸ್ತುಗಳನ್ನು ಕೈಯೊಳಗೆ ತಕ್ಕೊಂಡು ಹೀಗೆ ಪರೀಕ್ಷಿಸಿ ನೋಡಬೇಕು."

ಪೆಟ್ಟಿಗೆಯನ್ನು ಯಾವ ರೀತಿಯಿಂದ ತೂಕಮಾಡಿ ನೋಡಬೇಕೆಂದು ತೋರಿಸಲಿಕ್ಕೆ ಅವುಗಳನ್ನು ಒಂದರ ತರುವಾಯ ಒಂದು ಕೈಯೊಳಗೆ ತಕ್ಕೊಂಡು ತೋರಿಸಬೇಕು.

ಎರಡನೇ ಸಾರಿ ಪೆಟ್ಟಿಗೆಗಳನ್ನು ಕೂಡಿಸಿ ಅವುಗಳ ಸ್ಥಳಗಳನ್ನು ಬದಲಿಸಬೇಕು.

ಮೂರನೇ ಸಾರಿ ಅವುಗಳ ಸ್ಥಳಗಳು ಮೊದಲನೇ ಸಾರಿಯ ಹಾಗೆಯೇ ಇರಬೇಕು.

## ವರ್ಷ ೫

**ಪ್ರಶ್ನೆ ೧.**—ಸೌಂದರ್ಯಜ್ಞಾನವು (ತಪ್ಪಿಲ್ಲದೆ).

ಈ ಪ್ರಶ್ನೆಯು ಸಲುವಾಗಿ ತಯಾರವಾಡಿದ ಕಾರ್ಡಿನ ಮೇಲಿನ ಚಿತ್ರಗಳ ಜೋಡಿಗಳಲ್ಲಿ ಪ್ರತಿಯೊಂದು ಜೋಡಿಯನ್ನು ಹುಡುಗನ ಎದುರಿಗೆ ಒಂದರ ತರುವಾಯ ಒಂದು ತೋರಿಸಬೇಕು. ಒಂದು ಜೋಡಿಯನ್ನು ತೋರಿಸುವ ಮುಂದೆ ಬೇರೆ ಜೋಡಿಗಳನ್ನು ಕಾರ್ಡಬೋರ್ಡಿನಿಂದ ಅಥವಾ ಬಿಳೇ ಕಾಗದದ ಹಾಳಿಯಿಂದ ಮುಚ್ಚಿ ಇಡಬೇಕು.

ತರುವಾಯ ಹೀಗೆ ಅನ್ನಬೇಕು—

"ಈ ಎರಡು ಚಿತ್ರಗಳಲ್ಲಿ ಯಾವದು ಚಂದ ಕಾಣಿಸುತ್ತದೆ?"

**ಪ್ರಶ್ನೆ ೨.**—ಉಪಯೋಗದ ದೃಷ್ಟಿಯಿಂದ ವ್ಯಾಖ್ಯೆಯನ್ನು ಹೇಳುವದು (೬ರಲ್ಲಿ ೪. ಉತ್ತರ ಬರಲಿಕ್ಕೆ ಪ್ರತಿಯೊಂದಕ್ಕೆ ಸುಮಾರು ೧ ಮಿನೀಟು ಕೊಡಬೇಕು).

ಕೆಳಗಿನ ಶಬ್ದಗಳನ್ನು ಕೊಡಬೇಕು—ಖುರ್ಚಿ, ಎತ್ತು (ಕುದುರೆ), ಚಮಚೆ (ಸವಟು), ಗೊಂಬೆ, ಪೇನಸಿಲು (ಸೀಸ ಪೇನಸಿಲು), ಕಂಬಳಿ.

"ನೀನು ಖುರ್ಚಿಯನ್ನು ನೋಡಿದ್ದಿಯಲ್ಲ? ನಿನಗೆ ಖುರ್ಚಿಯೆಂದರೇನೆಂಬದು ಗೊತ್ತದೆ? ಈಗ ಖುರ್ಚಿ ಅಂದರೇನು ನನಗೆ ಹೇಳು, ನೋಡೋಣ."

ಹುಡುಗನು ಸಮವಾದ ವ್ಯಾಖ್ಯೆಯನ್ನು ಕೊಡದೆ "ಇದು ಖುರ್ಚಿ" ಅಥವಾ "ಖುರ್ಚಿ ಅಂದರೆ ಖುರ್ಚಿ" ಎಂದು ಹೇಳಿದರೆ ಇನ್ನೊಮ್ಮೆ ಹೀಗೆ ಕೇಳಬೇಕು—

"ಅಹುದು, ಆದರೆ ಖುರ್ಚಿ ಅಂದರೇನು?"

ಹುಡುಗನು ಬಹಳೇ ಮಖೀನನು ಅಥವಾ ಹಟಮಾರಿ ಇದ್ದರೆ ಅವನ ಮನವೊಲಿಸಿ ಅವೇ ಪ್ರಶ್ನೆಗಳನ್ನು "ಖುರ್ಚಿ" ಶಬ್ದವನ್ನು ಉಪಯೋಗ ಮಾಡಿ ಎರಡು-ಮೂರು ಸಾರೆ ಕೇಳಬೇಕು. ಆದರೆ ಒಮ್ಮೆ ಹುಡುಗನು ಉತ್ತರ ಕೊಡಲಿಕ್ಕೆ ಹತ್ತಿದರೆ ಯಾವದೇ ಶಬ್ದದಿಂದ, ಕಣ್ಣಿನಿಂದ ಅಥವಾ

ಹುಬ್ಬಿನಿಂದ ಉತ್ತರವು ಸರಿಯುಲ್ಲ ಎಂದು ತೋರಿಸಬಾರದು. ಪ್ರತಿಯೊಂದು ಉತ್ತರ ಕೊಟ್ಟ ಬಳಿಕ "ಶಾಬಾಸ" ಎಂದು ಅನ್ನಬೇಕು. ಆದರೆ ಉತ್ತರವು ತೀರ ಕೆಟ್ಟಿದ್ದರೆ ಅದೇ ಉತ್ತಮವವದೆ ಎಂದು ಹುಡುಗನಿಗೆ ತೋರಗೊಡದೆ ಅವನಿಗೆ ಮುಂದೆ ಸುಧಾರಿಸಿಕೊಳ್ಳಲಿಕ್ಕೆ ಆಸ್ಪದಕೊಡಬೇಕು. "ಚಮಚೆಯಿಂದ ಏನು ಮಾಡುತ್ತಾರೆ?" ಎಂದು ಎಂದಿಗೂ ಕೇಳಬಾರದು. ಇದು ಮಾನಸ ಶಾಸ್ತ್ರ ಪರೀಕ್ಷೆಯು ನಿಯಮಗಳ ವಿರುದ್ಧವಾಗಿದೆ.

ವ್ಯಾಖ್ಯೆಯು ಎರಡನೇ ಶಬ್ದವು "ಕುದುರೆ" ಅಥವಾ "ಎತ್ತು". ಹುಡುಗನು ಅಥವಾ ಹುಡುಗಿಯು ಕುದುರೆ ಮತ್ತು ಅದರ ಸಾಧಾರಣ ಉಪಯೋಗವನ್ನು ನೋಡಿದ್ದರೆ ಈ ಶಬ್ದವು "ಎತ್ತಿ"ಗಿಂತ ಚಲೋದು. "ಎತ್ತು" ಶಬ್ದವನ್ನು ಉಪಯೋಗಮಾಡಿದರೆ ಹುಡುಗನು ಅದರ ವ್ಯಾಖ್ಯೆಯನ್ನು "ಎತ್ತು ಅಂದರೆ ಆಕಳು" ಎಂದು ಕೆಲವು ಸಾರಿ ಹೇಳುತ್ತಾನೆ. ಆವಾಗ್ಗೆ ಮುಂದೆ ಕೆಳಗಿನಂತೆ ಕೇಳಬೇಕು—"ಎತ್ತು ಅಂದರೆ ಆಕಳು ಅಲ್ಲ. ಅಹುದೇನು? ಈಗ ಎತ್ತು ಅಂದರೆ ಏನು ಹೇಳು."

ಹುಡುಗರ ಉತ್ತರಗಳ ಮಾದರಿಗಳು—

## ಸಮ

ಖುರ್ಚಿ—ಕೂಡ್ರುವದು; ಕೂತುಕೊಳ್ಳುವದು; ಖುರ್ಚಿಯು ಮೇಲೆ ಕೂಡ್ರುವದು; ಕಟ್ಟಿಗೆಯಿಂದ ಮಾಡುತ್ತಾರೆ; ಖುರ್ಚಿಯು ಮೇಲೆ ಲೇಡೀ ಸಾಹೇಬರು ಕೂಡ್ರುತ್ತಾರೆ; ಅದರ ಮೇಲೆ ಎಲ್ಲವರು ಕೂಡ್ರುತ್ತಾರೆ.

ಎತ್ತು—ಛಕ್ಕಡಿ ಹೊಡೆಯುತ್ತಾರೆ; ಎತ್ತನ್ನು ಕಟ್ಟಿಕೊಂಡು ಜಗ್ಗಿಕೊಂಡುಹೋಗುತ್ತಾರೆ; ಗಾಡಿಯುದು; ಆಕಳ ಹಾಗೆ ಬೆಳ್ಳಗೆ ಇರುತ್ತದೆ; ಕರ ಇರುವದಿಲ್ಲ, ಹಾಲು ಹಿಂಡುವದಿಲ್ಲ.

ಚಮಚೆ—ಚಹಾಕೆ ಹಾಕುವದು; ತುಪ್ಪ ಹಾಕುವದು; ಹಾಲು ಕುಡಿಯುವದು; ತಿರುವುವದು; ತಾಟಿನೊಳಗೆ ತಂದು ಹಾಕುತ್ತಾರೆ; ದುಂಡಗೆ ಇರುತ್ತದೆ; ಹಾಲು ಕುಡಿಸುತ್ತಾರೆ; ಎಂಥದು ಕಾಸಿ ಮಾಡುತ್ತಾರೆ ಆವಾಗ್ಗೆ ಚಮಚೆ ಹಾಕಬೇಕು; ಉಪ್ಪಿನಕಾಯಿ ಹಾಕುವದು.

ಗೊಂಬೆ—ಆಡುವ ಗೊಂಬೆ; ಆಡುವದು; ಗೊಂಬೆ ತಕ್ಕೊಂಡು ಆಡಬೇಕು; ಕರ್ಪುರದ್ದು ಗೊಂಬೆ; ಕರ್ಪುರದ್ದು ಅಥವಾ ಅರಿವೆ ತುಂಬಿದ್ದು.

ಪೇನಸಿಲು (ಸೀಸ ಪೇನಸಿಲು)—ಬರೆಯುವದು; ಪಾಟೀ ಮೇಲೆ ಬರೆಯುವದು; ಕಾಗದಕ್ಕೆ ಬರೆಯುವದು.

ಕಂಬಳಿ—ಹಾಸಿಕೊಳ್ಳುವದು; ಹೊತ್ತುಕೊಳ್ಳುವದು; ಮಲಗಿಕೊಳ್ಳುವದು; ಹಾಸಿಕೊಂಡು ಮಲಗಿಕೊಳ್ಳುವದು; ಮಲಗುತ್ತಾರೆ.

**ಪ್ರಶ್ನೆ ೩.**—ಮೂರು ಕೃತ್ಯಗಳು (ಮೂರೂ ಅನುಕ್ರಮವಾಗಿ ಸರಿ ಇರಬೇಕು).

ಖುರ್ಚಿಯ ಮೇಲಿಂದ ಎದ್ದು ಹುಡುಗನನ್ನು (ಹುಡುಗಿಯನ್ನು) ಕೋಣೆಯ ಸಡುವೆ ಕರೆದೊಯ್ದು ಕೆಳಗೆ ಕೊಟ್ಟಂತೆ ಅನ್ನಬೇಕು—

"ಈಗ ನೀನು ನನ್ನ ಸಲುವಾಗಿ ಸ್ವಲ್ಪ ಕೆಲಸವನ್ನು ಮಾಡಬೇಕು. ಇದು ನೋಡು ಕೀಲಿಕೈ. ಇದನ್ನು ಅಲ್ಲಿ ಖುರ್ಚಿಯ ಮೇಲೆ ಒಯ್ದು ಇಡು. ಆ ಬಳಿಕ ಆ ಬಾಗಿಲನ್ನು ಮುಚ್ಚು (ತೆರೆ); ತರುವಾಯ ಆ ಪೆಟ್ಟಿಗೆಯನ್ನು ನನಗೆ ತಂದುಕೊಡು (ಅನುಕ್ರಮದಿಂದ ಆಯಾ ವಸ್ತುಗಳ ಕಡೆಗೆ ಬೊಟ್ಟುಮಾಡಿ), ತಿಳಿಯಿತೇನು? ತಪ್ಪದೆ ಹೀಗೇ ಮಾಡಬೇಕು. ಮೊದಲು ಕೀಲಿಕೈಯನ್ನು ಖುರ್ಚಿಯ ಮೇಲೆ ಇಡು, ನಂತರ ಬಾಗಿಲು ಮುಚ್ಚು (ತೆರೆ), ಆ ಬಳಿಕ ಆ ಪೆಟ್ಟಿಗೆಯನ್ನು ನನಗೆ ತಂದುಕೊಡು (ಮೊದಲಿನಂತೆ ವಸ್ತುಗಳ ಕಡೆಗೆ ಬೊಟ್ಟುಮಾಡಿ). ನಡೆ, ಸುರು ಮಾಡು."

**ಪ್ರಶ್ನೆ ೪.**—ಎಡಬಲಗಳನ್ನು ತಿಳಿದುಕೊಳ್ಳುವದು (೩ರಲ್ಲಿ ೩ ಅಥವಾ ೬ರಲ್ಲಿ ೫).

"ನಿನ್ನ ಬಲಗೈಯನ್ನು ತೋರಿಸು."

"ನಿನ್ನ ಎಡಗಿವಿಯನ್ನು ತೋರಿಸು."

"ನಿನ್ನ ಬಲಗಣ್ಣನ್ನು ತೋರಿಸು."

ಒಂದೇ ತಪ್ಪು ಆದರೆ ಇವೇ ಪ್ರಶ್ನೆಗಳನ್ನು "ಬಲ" ಇದ್ದಲ್ಲಿ "ಎಡ" ಮತ್ತು "ಎಡ" ಇದ್ದಲ್ಲಿ "ಬಲ" ಹಾಕಿ ತಿರುಗಿ ಕೇಳಬೇಕು.

**ಪ್ರಶ್ನೆ ೫.**—ನಾಲ್ಕು ನಾಣ್ಯಗಳ ಹೆಸರು ಹೇಳುವದು (೪ರಲ್ಲಿ ೩).

ಆಣೆ, ಬಿಲ್ಲಿ, ರೂಪಾಯಿ, ಪಾವಲಿ (ನಾಲ್ಕು ಆಣೆ)—ಈ ನಾಣ್ಯಗಳನ್ನು ಉಪಯೋಗಿಸಬೇಕು. ಇವುಗಳಲ್ಲಿ ಪ್ರತಿಯೊಂದು ನಾಣ್ಯವನ್ನು ಒಂದರ ತರುವಾಯ ಒಂದು ಮೇಲಿನ ಕ್ರಮದಿಂದ ಹುಡುಗನ ಎದುರಿಗೆ ಇಟ್ಟು ಮುಂದೆ ಹೀಗೆ ಅನ್ನಬೇಕು—

"ಇದು ಏನು?"

ಹುಡುಗನು ಬರೇ "ನಾಣ್ಯ", "ರೊಕ್ಕ" ಅಥವಾ "ತಾಮ್ರ" ಅಂದರೆ ಮುಂದೆ ಕೆಳಗಿನಂತೆ ಅನ್ನಬೇಕು—

'ಸರಿಯಾಗಿ ಹೇಳಿದಿ. ಆದರೆ ಈ ನಾಣ್ಯದ ಹೆಸರು ಏನು?"

ಇವುಗಳ ಹೊರತು ಸ್ಪಷ್ಟೀಕರಿಸಲಿಕ್ಕೆ ಬೇರೆ ಯಾವ ಪ್ರಶ್ನೆಗಳನ್ನೂ ಕೇಳಬಾರದು.

**ಪ್ರಶ್ನೆ ೬.**—ಹದಿಮೂರು ಬಿಲ್ಲಿಗಳನ್ನು ಎಣಿಸುವದು (ಎರಡು ಸಾರಿಯಲ್ಲಿ ಒಂದು ಸಾರಿ ತಪ್ಪಿಲ್ಲದೆ ಎಣಿಸುವದು).

(೪ನೇ ವರ್ಷ, ೫ನೇ ಪ್ರಶ್ನೆಯ ಹಾಗೆ.)

**ವೈಕಲ್ಪಿಕ ಪ್ರಶ್ನೆ ೧.**—ಮುಂಜಾನೆ ಮಧ್ಯಾಹ್ನ ಅಥವಾ ಮುಂಜಾನೆ ಸಂಜೆ.

"ಇದು ಮುಂಜಾನೆಯೋ ಮಧ್ಯಾಹ್ನವೋ?" (ಮುಂಜಾನೆ ಹೊತ್ತಿನಲ್ಲಿ ಕೇಳುವದು.)

"ಇದು ಮಧ್ಯಾಹ್ನವೋ ಮುಂಜಾನೆಯೋ?" (ಮಧ್ಯಾಹ್ನದಲ್ಲಿ ಕೇಳುವದು.)

"ಇದು ಸಂಜೆಯೋ ಮುಂಜಾನೆಯೋ?" (ಸಂಜೆಯಲ್ಲಿ ಕೇಳುವದು.)

**ವೈಕಲ್ಪಿಕ ಪ್ರಶ್ನೆ ೨.**—ಅಡ್ಡಹೆಸರು ಹೇಳುವದು.

"ನಿನ್ನ ಹೆಸರೇನು?"

"ನಿನ್ನ ಅಡ್ಡಹೆಸರೇನು?"

ಹುಡುಗನು ತನ್ನ ಹೆಸರು ಅಷ್ಟೇ ಹೇಳಲಿಕ್ಕೆ ಹತ್ತಿದರೆ ಮುಂದೆ ಹೀಗೆ ಅನ್ನಬೇಕು—

"ಸರಿ; ಆದರೆ ನಿನ್ನ ಎರಡನೇ ಹೆಸರು ಏನು?"

"ಮಹಾದೇವ—ಮುಂದೆ?"

"ನಿನ್ನ ಹೆಸರು 'ಮಹಾದೇವ ಜೋಶಿ' ಏನು?"

**ವೈಕಲ್ಪಿಕ ಪ್ರಶ್ನೆ ೩.**—ವಯಸ್ಸು ಹೇಳುವದು.

"ನಿನ್ನ ವಯಸ್ಸೆಷ್ಟು? ನಿನಗೆ ಎಷ್ಟು ವರ್ಷಗಳಾಗಿವೆ?"

## ವರ್ಷ ೬

**ಪ್ರಶ್ನೆ ೧.**—ನಾಲ್ಕು ಅಂಕೆಗಳನ್ನು ಮತ್ತೆ ಅನ್ನುವದು (೩ರಲ್ಲಿ ೧).

"ಈಗ ಕೇಳು. ನಾನು ಕೆಲವು ಅಂಕೆಗಳನ್ನು ಅನ್ನುತ್ತೇನೆ. ನಾನು ಅಂದ ಬಳಿಕ ನೀನು ಅದೇ ಪ್ರಕಾರ ಮತ್ತೆ ಅನ್ನಬೇಕು. ಲಕ್ಷ್ಯಗೊಟ್ಟು ಕೇಳು ಮತ್ತು ನಾನು ಅಂದ ಹಾಗೆಯೇ ಮತ್ತೆ ಅನ್ನು—

"೪—೭—೩—೯; ೨—೮—೫—೪; ೭—೨—೬—೧."

ಪರೀಕ್ಷಕನು ಎರಡನೇ ಸಾರಿ ಓದಿ ಹೇಳಿದ ಅಂಕಮಾಲೆಯನ್ನು ಹುಡುಗನು ಸರಿಯಾಗಿ ಅಂದರೆ ಅದನ್ನು ಲೆಕ್ಕದಲ್ಲಿ ಹಿಡಿಯಬಾರದು.

**ಪ್ರಶ್ನೆ ೨.**—ಗ್ರಹಿಸುವದು—ಎರಡನೇ ತರಗತಿ (೩ರಲ್ಲಿ ೨; ವೇಳೆ ½ ಮಿನೀಟು).

(ಅ) "ನೀನು ಸಾಲೆಗೆ ಬರಲಿಕ್ಕೆ (ಹೋಗಲಿಕ್ಕೆ) ಹೊರಟಾಗ ಮಳೆಯು ಆಗಲಿಕ್ಕೆ ಹತ್ತಿದರೆ ನೀನು ಏನು ಮಾಡುವಿ? (ಮಾಡಬೇಕು)?"

(ಬ) "ನೀನು ಇರುವ ಮನೆಗೆ ಬೆಂಕಿ ಹತ್ತಿದರೆ ನೀನು ಏನು ಮಾಡುವಿ? (ಮಾಡಬೇಕು)?"

(ಕ) "ನೀನು (ಬೇರೆ) ಊರಿಗೆ ಹೊರಟಾಗ ನಿನಗೆ ಗಾಡಿಯು (ಅಥವಾ ಟ್ರಾಮ್‌ಗಾಡಿಯು ಅಥವಾ ಮೋಟರು, ಅಥವಾ ತರಿಯು) ತಪ್ಪಿದರೆ ನೀನು ಏನು ಮಾಡುವಿ? (ಮಾಡಬೇಕು)?"

ಐದರಿಂದ ಹತ್ತು ಸೆಕಂಡಿನ ಮೇಲೆ ಪ್ರಶ್ನೆಯನ್ನು ಎರಡನೆಯ ಸಾರಿ ಕೇಳಬೇಕು. ಈ ಸಾರಿ ಪ್ರಶ್ನೆಯನ್ನು ಎರಡನೆಯ ರೀತಿಯಿಂದ ಕೇಳಬೇಕು.

ಹುಡುಗರ ಉತ್ತರಗಳು—

ಸಮ

(ಅ) ಛತ್ರಿ ತಕ್ಕೊಂಡು ಹೋಗಬೇಕು; ಛತ್ರಿ ತಕ್ಕೊಂಡು ಬರು

ತ್ತೇನೆ; ಛತ್ತರಗಿ ಹಿಡಕೊಳ್ಳುತ್ತೇನೆ; ಎಲ್ಲಿಯಾದರೂ ನಿಂತಿರುತ್ತೇನೆ; ಮನೆಗೆ ಓಡಿ ಛತ್ತರಗಿ ತರಬೇಕು.

(ಬ) ನೀರು ಹಾಕುತ್ತೇವೆ; ನೀರು ಹಣಿಸುತ್ತೇವೆ; ಅದನ್ನೆಲ್ಲ ಆರಿಸಬೇಕು; ಅಷ್ಟರನ್ನೂ ಎಬ್ಬಿಸಿ ಹೊರಗೆ ಬರುತ್ತೇನೆ.

(ಕ) ಇನ್ನೊಂದು ಮೋಟರ ತರುತ್ತೇನೆ; ಮತ್ತೆಲ್ಲ್ಯಾದರೂ ಮೋಟರ ಇದ್ದರೆ ಹೇಳಬೇಕು; ಟಾಂಗಾದೊಳಗೆ ಕೂತುಕೊಂಡು ಹೋಗುತ್ತೇವೆ; ನಾನು ನಡಕೋತ ಹೋಗುತ್ತೇನೆ; ಮತ್ತು ರಾತ್ರಿಗಾಡಿಗೆ ಹೋಗುತ್ತೇನೆ; ಆಗ ಗಾಡಿಯೊಳಗೆ ಕೂತುಹೋಗುತ್ತೇವೆ; ಮತ್ತು ಅಲ್ಲೇ ಕೂಡ್ರಬೇಕು, ಮತ್ತೊಂದು ಮೋಟರಿಗೆ ಕೂಡ್ರಬೇಕು; ಇನ್ನೊಂದು ದಿನ ಹೋಗುತ್ತೇನೆ.

## ತಪ್ಪು

(ಅ) ತೋಯಿಸಿಕೊಳ್ಳುತ್ತೇನೆ; ಮನೆಯೊಳಗೆ ಕೂಡ್ರುತ್ತೇನೆ; ಸಾಲೆಗೆ ಹೋಗುವದಿಲ್ಲ.

(ಬ) ಹೊರಗೆ ಬರುತ್ತೇನೆ; ಮತ್ತೊಂದು ಮನೆ ಕಟ್ಟಿಸಬೇಕು; ಇನ್ನೊಂದು ಮನೆಯಲ್ಲಿ ಹೋಗುತ್ತೇವೆ; ಸಾಯುತ್ತೇನೆ; ಅಳುತ್ತೇನೆ; ಓಡಿಹೋಗುತ್ತೇನೆ.

(ಕ) ಮೋಟರದೊಳಗೆ ಸಾಯುತ್ತೇವೆ; ಮತ್ತು ಹೊರಳಿಸಬೇಕು; ಮನೆಗೆ ಹೋಗುತ್ತೇನೆ; ಅಳುತ್ತೇನೆ; ಹೋಗುವದಿಲ್ಲ.

**ಪ್ರಶ್ನೆ ೩.**—ಕತ್ತರಿಸಿದ ಕಾರ್ಡು (ಮೂರು ಪ್ರಯತ್ನಗಳಲ್ಲಿ ೨ ಸರಿ. ಪ್ರತಿಯೊಂದಕ್ಕೆ ೧ ಮಿನೀಟು. ಇದಕ್ಕೂ ಉತ್ತಮ ೩ ಮಿನೀಟುಗಳಲ್ಲಿ ೩ ಸಾರಿ ಬರೋಬರಿ ಮಾಡುವದು).

೨ ಇಂಚು × ೩ ಇಂಚು ಆಕಾರದ ಎರಡು ಜಳೇ ದಪ್ಪವಾದ ಕಾರ್ಡುಗಳನ್ನು ತಕ್ಕೊಳ್ಳಬೇಕು. ಇವುಗಳಲ್ಲಿ ಒಂದನ್ನು ಒಂದು ಕೋಣದಿಂದ ವಿರುದ್ಧ ಕೋಣದ ವರೆಗೆ ಅಡ್ಡ ಎರಡು ತ್ರಿಕೋಣಗಳಾಗುವ ಹಾಗೆ ಕೊಯ್ಯಬೇಕು. ಕೊಯ್ಯದೆ ಇದ್ದ ಕಾರ್ಡನ್ನು ಹುಡುಗನ ಎದುರಿಗೆ ಸ್ವಲ್ಪ ದೂರ ಅದರ ಉದ್ದವಾದ ಬಾಜುವನ್ನು ಅಡ್ಡ ಆಗುವ ಹಾಗೆ

ಇಡಬೇಕು. ಇದಕ್ಕೂ ಸ್ವಲ್ಪ ಸಮೀಪವಾಗಿ ಆ ಎರಡೂ ತ್ರಿಕೋಣ ಗಳನ್ನು ಹುಡುಗನ ಎದುರಿಗೆ ಕೆಳಗೆ ತೋರಿಸಿದಂತೆ ಇಡಬೇಕು.

ಮುಂದೆ ಹೀಗೆ ಅನ್ನಬೇಕು—

"ಇವೆರಡೂ ತುಂಡುಗಳನ್ನು ತಕ್ಕೊಂಡು" (ತ್ರಿಕೋಣಗಳ ಮೇಲೆ ಬೆರಳಿಟ್ಟು) "ತೀರ ಇದರಂತೆಯೇ" (ಕೊಯ್ಯದೆ ಇದ್ದ ಕಾರ್ಡನ್ನು ತೋರಿಸಿ) "ಕಾಣುವ ಹಾಗೆ ಜೋಡಿಸಿ ತೋರಿಸು, ನೋಡೋಣ."

ಏನು ಮಾಡಬೇಕೆಂದು ತಿಳಿಯದೆ ಹುಡುಗನು ಸುಮ್ಮನೆ ಕೂತರೆ— "ಇವುಗಳನ್ನು ಬೇಕಾದ ಹಾಗೆ ತಿರುಗಿಸಿ ತೀರ ಇದರಂತೆಯೇ ಕಾಣುವ ಹಾಗೆ ಜೋಡಿಸಿ ತೋರಿಸು" ಎಂದು ಅನ್ನಬೇಕು.

ಹುಡುಗನು ರಚಿಸಿದ ಮೇಲೆ—"ಹಾಗೆಯೇ ಕಾಣಿಸುತ್ತವೆ, ಏನು?" ಎಂದು ಕೇಳಬೇಕು.



ಒಂದೊಂದು ಮಿನೀಟಿನಂತೆ ಮೂರು ಸಾರಿ ಪ್ರಯತ್ನವನ್ನು ಮಾಡಲಿಕ್ಕೆ ಕೊಟ್ಟರೆ ಪ್ರತಿಯೊಂದು ಪ್ರಯತ್ನವು ಆದಕೂಡಲೆ ತುಂಡುಗಳನ್ನು ತಿರುಗಿ ಮೇಲೆ ತೋರಿಸಿದಂತೆ ರಚಿಸಿ ಕೆಳಗಿನಂತೆ ಸಂಕ್ಷೇಪವಾಗಿ ಕೇಳಬೇಕು—

"ತೀರ ಇದರಂತೆಯೇ ಕಾಣುವ ಹಾಗೆ ಇವನ್ನು ತಿರುಗಿ ಜೋಡಿಸು."

ಪ್ರಯತ್ನವನ್ನು ಮಾಡುವಾಗ ಹುಡುಗನು ನಡುಮಧ್ಯದಲ್ಲಿ ಒಂದು ತುಂಡನ್ನು ಬುಡಮೇಲು ಮಾಡಿ ಇಟ್ಟರೆ, ಅಂದರೆ ಮೇಲ್ಭಾಗವನ್ನು ಕೆಳಗೆ ಮಾಡಿ ಇಟ್ಟರೆ, ಅದನ್ನು ಮತ್ತೊಮ್ಮೆ ಮೊದಲಿನಂತೆ ಸರಿಯಾಗಿ ಇಟ್ಟು ಹುಡುಗನಿಗೆ ಅಲ್ಲಿಂದ ತಿರುಗಿ ಪ್ರಯತ್ನವನ್ನು ಮಾಡಲಿಕ್ಕೆ ಹೇಳಬೇಕು. ಕಾರಣ—ಒಂದು ತುಂಡನ್ನು ಹುಡುಗನು ಬುಡಮೇಲು ಮಾಡಿದರೆ ಸಮವಾದ ಆಕೃತಿಯನ್ನು ರಚಿಸುವದು ಅಶಕ್ಯವಾದ ಮಾತು. ಪರೀಕ್ಷಕನು ಈ ಪ್ರಕಾರ ತುಂಡುಗಳನ್ನು ತಿರುಗಿ ಇಟ್ಟ ವೇಳೆಯಿಂದ ಪ್ರಯತ್ನವು

ಆರಂಭವಾಯಿತೆಂದು ತಿಳಿದುಕೊಳ್ಳಬೇಕು. ಹಿಂದಿನ ವೇಳೆಯನ್ನು ಲೆಕ್ಕದಲ್ಲಿ ತಕ್ಕೊಳ್ಳಬಾರದು.

**ಪ್ರಶ್ನೆ ४.**—ಬೆರಳುಗಳ ಸಂಖ್ಯೆಯನ್ನು ಹೇಳುವದು (ತಪ್ಪಿಲ್ಲದೆ).

"ನಿನ್ನ ಒಂದು ಕೈಗೆ ಎಷ್ಟು ಬೆರಳು (ಬೊಟ್ಟು) ಅವೆ?"

"ಎರಡನೇ ಕೈಗೆ ಎಷ್ಟು ಅವೆ?"

"ಎರಡೂ ಕೈಗೆ ಕೂಡಿ ಎಷ್ಟು ಅವೆ?"

ಪ್ರಶ್ನೆ ಕೇಳಿದ ಬಳಿಕ ಹುಡುಗನ ಬೆರಳುಗಳ ಕಡೆಗೆ ಲಕ್ಷ್ಯ ಇಡಬೇಕು; ಮತ್ತು ಹುಡುಗನು ಬೆರಳುಗಳನ್ನು ಎಣಿಸುತ್ತಾನೆ ಎಂದು ಕಂಡುಬಂದರೆ, ಕೆಳಗಿನಂತೆ ಅನ್ನಬೇಕು—

"ಎಣಿಸಬಾರದು, ಎಣಿಸದೆ ಹೇಳು."

ತರುವಾಯ ಮೊದಲಿನ ಪ್ರಶ್ನೆಗಳನ್ನು ತಿರುಗಿ ಕೇಳಬೇಕು.

**ಪ್ರಶ್ನೆ ೫.**—ಚಿತ್ರಗಳ ವರ್ಣನೆ (३ರಲ್ಲಿ ೨ ಚಿತ್ರಗಳ ವರ್ಣನೆ ಅಥವಾ ಅದಕ್ಕಿಂತ ಚಲೋ ಉತ್ತರ. ವೇಳೆಯ ಪರಮಾವಧಿ ಒಂದೊಂದಕ್ಕೆ ೨ ಮಿನೀಟು).

ಚಿತ್ರಗಳನ್ನು ಕೆಳಗಿನ ಅನುಕ್ರಮದಿಂದ ತೋರಿಸಬೇಕು—

೧. ರೇಲ್ವೇ ಸ್ಟೇಶನ್, ೨. ಮನೆಗೆ ಬಂದವರ ಸತ್ಕಾರ, ३. ಮೋಟರಿನ ಅಪಘಾತ.

"ಈ ಚಿತ್ರವು ಯಾತರ ವಿಷಯವಾಗಿ ಅದೆ?"

"ಈ ಚಿತ್ರವು ಯಾತರದು?"

"ಈ ಚಿತ್ರದೊಳಗೆ ಏನೇನು ನಡೆದಿದೆ?"

"ಈ ಚಿತ್ರವು ಏನು ಹೇಳುತ್ತದೆ?"

ಈ ಪ್ರಶ್ನೆಗಳನ್ನು ಹುಡುಗರಿಗೆ ಉತ್ತೇಜನವನ್ನು ಕೊಡುವದಕ್ಕಾಗಿ ಎರಡು-ಮೂರು ರೀತಿಯಿಂದ ತಿರುಗಿ ಕೇಳಬಹುದು. ಆದರೆ ಒಟ್ಟಿನ ಮೇಲೆ ೨ ಮಿನೀಟಿನ ತನಕ ವೇಳೆಯನ್ನು ಕೊಡಬಹುದು.

ಹುಡುಗರ ಉತ್ತರಗಳು—

ನಮು

(ಅ) ಇಬ್ಬರು ಕೋಟ ಹಾಕಿಕೊಂಡಾರೆ, ಒಬ್ಬಾಕೆ ಸೀರೆ ಉಟ್ಟು

ಕೊಂಡು ಏನೋ ತಕ್ಕೊಂಡು ಹೋಗಲಿಕ್ಕೆ ಹತ್ತ್ಯಾಳೆ; ಇವರಿಬ್ಬರೂ ಬೆಟ್ಟಿಯಾಗುತ್ತಾರೆ, ಇವಳು ಅಲ್ಲಿ ನಿಂತಿದ್ದಾಳೆ; ಊರಿಗೆ ಹೋಗಲಿಕ್ಕೆ ಹಾಸಿಗೆ ಇಟ್ಟುಕೊಂಡಿದ್ದಾರೆ, ಮಳೆ ಬರುತ್ತದೆ ಎಂತ ಕೊಡೆ ಹಿಡ ಕೊಂಡಾರೆ; ಇಬ್ಬರೂ ಕೊಡೆ ಹಿಡಿದಿದ್ದಾರೆ, ಒಬ್ಬಳು ಛತ್ತರಗಿ ಹಿಡಿ ದಿದ್ದಾಳೆ.

(ಬ) ಆಕೆ ಮನೆಯೊಳಗೆ ಕೂತಾಳೆ, ಆಕೆ ಹೊರಗೆ ನಿಂತಾಳೆ; ಇವಳು ಒಳಗೆ ಇದ್ದಾಳೆ, ಇವಳು ಬರಲಿಕ್ಕೆ ಹತ್ತ್ಯಾಳೆ, ಇಲ್ಲಿ ನಾಯಿ ನಿಂತದೆ; ಇವರು ಮಾತಾಡುತ್ತಾರೆ, ಒಬ್ಬಳ ಹತ್ತರ ನಾಯಿ ಕೂತದೆ; ಒಬ್ಬಳು ಸಾಲೆಗೆ ಹೋಗುತ್ತಾಳೆ, ಒಬ್ಬಳು ಇಲ್ಲೇ ನಿಂತಾಳೆ; ಒಬ್ಬಾಕೆ ಕಪಾಟಿನ ಹತ್ತರ ನಿಂತಾಳೆ, ಇಲ್ಲಿ ಒಬ್ಬಾಕೆ ನಿಂತಾಳೆ, ಕೆಳಗೆ ಬೆಕ್ಕು ಕೂತದೆ; ನೀ ಯಾರು ಇಲ್ಲಿ ಯಾಕೆ ಬಂದಿದ್ದೀ ಅನ್ನುತ್ತಾಳೆ; ಒಬ್ಬರು ತಂಬಿಗೆ ಹಿಡ ಕೊಂಡು ಒಳಗೆ ಬರಲಿಕ್ಕೆ ಹತ್ತ್ಯಾರೆ, ಮತ್ತೊಬ್ಬರು ಖುರ್ಚಿಯ ಮೇಲಿಂದ ಎದ್ದು ಯಾಕೆ ಒಳಗೆ ಬರುತ್ತೀರಿ ಕೇಳುತ್ತಾರೆ; ಒಬ್ಬಾಕೆ ಬಂದಾಳೆ, ಆಕೆ ಎದ್ದುನಿಂತು ಬೈಯಲಿಕ್ಕೆ ಹತ್ತ್ಯಾಳೆ; ಇಲ್ಲಿ ಒಬ್ಬಾಕೆ ಕೈಯೊಳಗೆ ಹೂವಿನ ಬುಟ್ಟಿ ತಕ್ಕೊಂಡು ನಿಂತಾಳೆ, ಈಕೆ ನೋಡಲಿಕ್ಕೆ ಹತ್ತ್ಯಾಳೆ, ಇಲ್ಲಿ ನಾಯಿ ಕೂತದೆ.

(ಕ) ಅಷ್ಟರೂ ಹೊರಗೆ ನಿಂತಾರೆ, ಇವ ಯಾತರೊಳಗೆ ಕೂತಾನೆ, ಇವ ಕೂಸಿಗೆ ಕರಕೊಂಡಾನೆ; ಇಲ್ಲಿ ಮೋಟರ ಬರಲಿಕ್ಕೆ ಹತ್ತಿದೆ, ಇವರು ದೂರ ಸರಿಯಲಿಕ್ಕೆ ಹತ್ತ್ಯಾರೆ, ಇವನು ಇವನನ್ನು ಹಿಡಕೊಂಡಾನೆ; ಕಾರಿನೊಳಗೆ ಎಲ್ಲವರು ಹೋಗಲಿಕ್ಕೆ ಮಾಡಲಿಕ್ಕೆ ಹತ್ತ್ಯಾರೆ, ಅವನು ಇವನಿಗೆ ಹಿಡಿದಿದ್ದಾನೆ; ಒಂದು ಬಸ್ಸು ಬಿಡುತ್ತಾರೆ, ಒಬ್ಬನು ಒಬ್ಬನಿಗೆ ಕುಸ್ತಿ ಹಿಡಿಯುತ್ತಾನೆ; ಮೋಟರ ಅದೆ, ಇಲ್ಲಿ ಒಬ್ಬನು ಹತ್ತಲಿಕ್ಕೆ ಹತ್ತ್ಯಾನೆ, ಇಲ್ಲಿ ಒಬ್ಬನು ನಿಂತಾನೆ; ಮೋಟರಿನೊಳಗೆ ಕೂತು ಹೋಗುವ ಮುಂದೆ ಇವನು ಏನೋ ಮಾಡ್ಯಾನೆ, ಅವನಿಗೆ ಹಿಡಿದಿದ್ದಾರೆ; ಒಂದು ಮೋಟರ ಹೋಗಲಿಕ್ಕೆ ಹತ್ತಿದೆ, ಒಬ್ಬ ಮನುಷ್ಯ ಬಡಿಗೆ ಹಿಡಕೊಂಡು ಹೋಗುತ್ತಿದ್ದರಿ, ಮತ್ತೊಬ್ಬನು ಅವನಿಗೆ ಎತ್ತ್ಯಾನೆರಿ.

## ತಪ್ಪು

(ಅ) ಅಣ್ಣ, ಅಪ್ಪ, ಅಪ್ಪ ; ಮನುಷ್ಯರ ವಿಷಯದ್ದು ; ಮನುಷ್ಯರದು, ಹೆಣ್ಣುಮಗಳದು, ಆಕಾಶ ; ಮನೆಯದು, ಮನುಷ್ಯರು ಇದ್ದಾರೆ, ಗಿಡ ಅವೆ, ಕಲ್ಲು, ರಸ್ತೆ, ಗಾಡಿ ಹೋಗುತ್ತಿರುತ್ತವೆ, ಹಳಿಗಳು ; ಮೂರು ಮನುಷ್ಯರು, ಛತ್ತರಗಿ ಹಿಡಕೊಂಡಾರೆ ; ನಾಟಕದ್ದು ; ಮನುಷ್ಯರದು ; ಗಂಡಸರದು, ಒಬ್ಬಾಕೆ ಹೆಂಗಸು ; ಸಾಲಿ ಚಿತ್ರ, ಸಾಲೆಗೆ ಹೋಗುವವ.

(ಬ) ಅಪ್ಪ, ಅವ್ವ, ನಾಯಿ, ಖುರ್ಚಿ, ಮನೆ ; ಇಬ್ಬರು ಹೆಣ್ಣುಮಕ್ಕಳು, ಬಾಗಿಲ, ಹೂವಿನ ಗಿಡ ; ಹೆಣ್ಣುಮಕ್ಕಳು, ನಾಯಿ, ಮನೆ ; ಇಬ್ಬರು ಹೆಂಗಸರು, ಒಂದು ನಾಯಿ, ಒಬ್ಬಾಕೆ ಬಾಗಿಲ ಹತ್ತರ ನಿಂತಾಳೆ ; ನಾಟಕದ್ದು ; ಹಾರುವರದು, ಮುಸಲ್ಮಾನೀ ; ಮನೆಯದು, ತಂಗಿ ಇಲ್ಲಿ ನಿಂತಾಳೆ, ತಾಯಿ ಇಲ್ಲಿ ನಿಂತಾಳೆ, ಇಲ್ಲಿ ಸಣ್ಣ ನಾಯಿ ಅದೆ ; ಸಾಲೆಗೆ ಹೋಗುತ್ತಾಳೆ ; ನಾಯಿ, ಮನೆ, ಹೆಂಗಸು, ಕಪಾಟ ಅದೆ.

(ಕ) ಅಪ್ಪ, ಅಣ್ಣ, ಮೋಟರ ; ಇದು ಮೋಟರ, ಗಿಡ, ಮನೆ, ಮನುಷ್ಯರು ; ಐದು ಮಂದಿ ಇದ್ದಾರೆ, ಇಬ್ಬರು ಹಿಡಕೊಂಡಾರೆ ; ಸಿನೇಮಾದ್ದು ; ಲಿಂಗಾಯತರ ಚಿತ್ರ, ಹಾರುವರದು ; ಒಬ್ಬ ಮನುಷ್ಯ ನಿಂತು ಹೀಗೆ ಚಿತ್ತ ಹಿಡಕೊಂಡಾನೆ, ಇಲ್ಲಿ ಹೆಟ್ ಹಾಕಿಕೊಂಡು ನಿಂತಾನೆ ; ಸಾಲೆಯ ಹತ್ತರ ಹೋಗುವ ಮೋಟರ.

**ಪ್ರಶ್ನೆ ೬.**—ಚಿತ್ರಗಳೊಳಗಿನ ಕೊರತೆಗಳನ್ನು ಹೇಳುವದು (೪ರಲ್ಲಿ ೩ ; ವೇಳೆಯ ಅವಧಿ ೧/೨ ಮಿನೀಟು).

" ಈ ಮೋರೆಯಲ್ಲಿ ಏನಾದರೂ ತಪ್ಪು ಅದೆ. ಅದರ ಎಲ್ಲ ಭಾಗಗಳು ಇಲ್ಲ. ಸ್ವಲ್ಪ ಭಾಗವು ಕಡಿಮೆ ಅದೆ. ಲಕ್ಷ್ಯಗೊಟ್ಟು ನೋಡಿ ಮೋರೆಯು ಯಾವ ಭಾಗವನ್ನು ಇದರೊಳಗೆ ತೆಗೆದಿಲ್ಲ, ತೋರಿಸು."

ಹುಡುಗನು ಅಥವಾ ಹುಡುಗಿಯು ಚಿತ್ರದೊಳಗೆ ತೆಗೆಯದೇ ಇದ್ದ ಭಾಗಗಳ ವಿಷಯಕ್ಕೆ ಮಾತಾಡಲಿಕ್ಕೆ ಹತ್ತಿದರೆ, ಉದಾಹರಣಾರ್ಥವಾಗಿ, ಹೊಟ್ಟೆ ಅಥವಾ ಕಾಲು ಇಲ್ಲ ಎಂದು ಹೇಳಿದರೆ, ಮುಂದೆ ಕೆಳಗಿನಂತೆ ಕೇಳಬೇಕು—

"ಹಾಗೆ ಅಲ್ಲ. ನಾನು ಮೋರೆಯ ವಿಷಯಕ್ಕೆ ಕೇಳುತ್ತೇನೆ. ಮತ್ತೆ ನೋಡು ಮತ್ತು ಮೋರೆಯ ಯಾವ ಭಾಗವು ಕಡಿಮೆ ಅದೆ ಹೇಳು."

ತಪ್ಪಿದರೆ—"ನೋಡು, ಇಲ್ಲಿ ಕಣ್ಣು ಇಲ್ಲ," ಎಂದು ಅನ್ನಬೇಕು.

ಬಳಿಕ ಮುಂದಿನ ಚಿತ್ರವನ್ನು ತೋರಿಸಿ ಹೀಗೆ ಕೇಳಬೇಕು—

"ಈ ಮೋರೆಯಲ್ಲಿ ಏನು ಕಡಿಮೆ ಅದೆ?"

ನಾಲ್ಕನೇ ಚಿತ್ರವು ಉಳಿದ ಚಿತ್ರಗಳಿಗಿಂತ ಭಿನ್ನವಿದ್ದ ಕಾರಣ ಈ ಚಿತ್ರವನ್ನು ತೋರಿಸಿ ಕೆಳಗಿನಂತೆ ಕೇಳಬೇಕು—

"ಈ ಚಿತ್ರದಲ್ಲಿ ಏನು ಕಡಿಮೆ ಅದೆ?"

**ವೈಕಲ್ಪಿಕ ಪ್ರಶ್ನೆ.**—ಬಣ್ಣಗಳ ಹೆಸರುಗಳನ್ನು ಹೇಳುವದು (ತಪ್ಪಿಲ್ಲದೆ).

ಕೆಂಪು, ಹಳದಿ, ನೀಲಿ, ಹಸರು—ಈ ಕ್ರಮದಿಂದ ಬಣ್ಣಗಳನ್ನು ತೋರಿಸಬೇಕು.

"ಈ ಬಣ್ಣದ ಹೆಸರೇನು?"

ಒಮ್ಮೊಮ್ಮೆ ಹುಡುಗರು ನೀಲಿ ಬಣ್ಣವನ್ನು ಜಾಂಬಳೀ ಎಂದು ಹೇಳುತ್ತಾರೆ. ಈ ಎರಡೂ ಬಣ್ಣಗಳು ಸಮೀಪ ಸಮೀಪ ಇದ್ದದರಿಂದ ಈ ಉತ್ತರವು ತೀರ ತಪ್ಪು ಎಂದು ತಿಳಕೊಳ್ಳಬಾರದು. ಇಂಥ ಪ್ರಸಂಗದಲ್ಲಿ ಒಂದು ಜಾಂಬಳೀ ಬಣ್ಣದ ಉಣ್ಣೆಯ ಅಥವಾ ಕಾಗದದ ತುಂಡನ್ನು ಹತ್ತರ ಇಟ್ಟುಕೊಂಡು ಇದು ಎಂಥ ಬಣ್ಣ ಎಂದು ಕೇಳಬೇಕು. ಮುಂದೆ ನೀಲಿ ಬಣ್ಣವನ್ನು ತೋರಿಸಿ "ಹಾಗಾದರೆ, ಇದೆಂಥ ಬಣ್ಣ" ಎಂದು ಕೇಳಬೇಕು. ಈ ಪ್ರಸಂಗವನ್ನು ಬಿಟ್ಟು ಉಳಿದ ವೇಳೆಯಲ್ಲಿ ಒಮ್ಮೆ ತಪ್ಪಿದ ಮೇಲೆ ಎರಡನೇ ಸಾರಿ ಪ್ರಶ್ನೆಯನ್ನು ಕೇಳಬಾರದು.

## ವರ್ಷ ೭

**ಪ್ರಶ್ನೆ ೧.**—೧೬ರಿಂದ ೧೮ ಅಕ್ಷರಗಳನ್ನು ಮತ್ತೆ ಅನ್ನುವದು (೩ರಲ್ಲಿ ಪೂರ್ಣ ಸರಿಯಾದ ೧ ಅಥವಾ ಒಂದೊಂದು ತಪ್ಪು ಇದ್ದ ೨).

(ಅ) "ನಾವು ದೂರ ಆಡ್ಯಾಡಲಿಕ್ಕೆ ಹೋಗೋಣ. ನನ್ನ ಕೋಲುತಾ."

(ಬ) "ಇಲ್ಲಿ ಮೌಜು ನೋಡು. ಈ ಬಲೆಯೊಳಗೆ ಇಲಿ ಸಿಕ್ಕದೆ."

(ಕ) "ರಾಮನು ಸೂಟಿಯನ್ನು ಪ್ರವಾಸಮಾಡಿ ಹಾಡಿ ಕಳೆದನು."

"ಈಗ, ಕೇಳು. ನಾನು ಈಗ ಏನೋ ಹೇಳುತ್ತೇನೆ. ನನ್ನದು ಆದ ಮೇಲೆ ನೀನು ಹಾಗೆಯೇ ಮತ್ತೆ ಅನ್ನಬೇಕು. ತಿಳಿಯಿತೇನು? ಲಕ್ಷ್ಯಗೊಟ್ಟು ಕೇಳು ಮತ್ತು ನಾನು ಹ್ಯಾಗೆ ಅನ್ನುವೆನೋ ಹಾಗೆಯೇ ತಪ್ಪದೆ ತಿರುಗಿ ಅನ್ನಬೇಕು."

ಮುಂದೆ ಮೇಲಿನ ವಾಕ್ಯಗಳನ್ನು ಸಾವಕಾಶವಾಗಿ ಅರ್ಥಬೋಧವಾಗುವಂತೇ ಸ್ವಚ್ಛವಾಗಿ ಅನ್ನಬೇಕು.

ಪ್ರತಿಯೊಂದು ಉತ್ತರದ ತರುವಾಯ "ಸಮವಾಗಿ ಅಂದೆಯೇನು?" ಎಂದು ಅನ್ನಬೇಕು.

**ಪ್ರಶ್ನೆ ೨.**—ಚೌಕಿನ ನಕಲು ಮಾಡುವದು (ಮಸಿಯಿಂದ. ೩ರಲ್ಲಿ ೨).

ಕಾರ್ಡಿನ ಮೇಲಿನ ಅಚ್ಚು ಹಾಕಿದ ಚೌಕಿನ ಮಾದರಿಯನ್ನು, ಅದರ ಉದ್ದ ಕರ್ಣವನ್ನು ಹುಡುಗನ (ಗಿಯ) ಕಡೆಗೆ ಮಾಡಿ ಇಡಬೇಕು. ಕೈಯಿಂದ ಇದರ ನಕಲನ್ನು ಮಾಡುವ ಆವಶ್ಯಕತೆ ಇದ್ದರೆ ಅದನ್ನು ಅಚ್ಚ ಕರೇ ಮಸಿಯಿಂದ ಮತ್ತು ಗೆರೆಗಳನ್ನು ದಪ್ಪಾಗಿ ತೆಗೆಯಬೇಕು. ಉದ್ದ ಕರ್ಣವನ್ನು ೩ ಇಂಚು ಮತ್ತು ಸಣ್ಣ ಕರ್ಣವನ್ನು ೧$\frac{1}{2}$ ಇಂಚು ಮಾಡಬೇಕು.

ಹುಡುಗನಿಗೆ (ಗಿಗೆ) ಟಾಕು, ಮಸಿ ಮತ್ತು ಕಾಗದವನ್ನು ಕೊಟ್ಟು ಕೆಳಗಿನಂತೆ ಅನ್ನಬೇಕು—

"ಇದರ ಹಾಗೆಯೇ ಆಕೃತಿಯನ್ನು ತೆಗೆದು ತೋರಿಸು, ನೋಡೋಣ."

ಮೂರು ಸಾರಿ ಪ್ರಯತ್ನವನ್ನು ಮಾಡಲಿಕ್ಕೆ ಹೇಳಬೇಕು.

ಹುಡುಗನು (ಗಿಯು) ತೆಗೆಯುವ ಮುಂದೆ—"ತೀರ ಇದರ ಹಾಗೆಯೇ ತೆಗೆ" ಎಂದು ತಾಕೀದಿ ಮಾಡಬೇಕು.

ಮಾದರಿಯ ಚೌಕಿನ ಸುತ್ತಲು ಬೆರಳನ್ನು ಮಾತ್ರ ಆಡಿಸಬಾರದು.

ಪ್ರತಿಯೊಂದು ಸಾರಿ ತೆಗೆದು ಆದ ಮೇಲೆ "ಚೆನ್ನಾಗಿ ತೆಗೆದಿದ್ದೀ ಏನು?" ಎಂದು ಕೊಂಡಾಡುತ್ತ ಅನ್ನಬೇಕು.

ಕಟ್ಟಕಡೆಗೆ—"ಯಾವದು ಎಲ್ಲಕ್ಕೂ ಉತ್ತಮವಾಗಿದೆ?" ಎಂದು ಕೇಳಬೇಕು.

**ಪ್ರಶ್ನೆ ೩.**—ಮೂರು ಅಂಕೆಗಳನ್ನು ತಿರುವು ಮುರುವು ಅನ್ನುವದು (೩ರಲ್ಲಿ ೧. ಸೆಕಂಡಿಗೆ ಒಂದರಂತೆ ಓದಬೇಕು).

"ಲಕ್ಷ್ಯಗೊಟ್ಟು ಕೇಳು. ನಾನು ಈಗ ಕೆಲವು ಅಂಕೆಗಳನ್ನು ಓದುತ್ತೇನೆ. ಆದರೆ ಈ ಸರತಿ ನೀನು ಅವನ್ನು ತಿರುವು ಮುರುವು ಅನ್ನಬೇಕು. ಉದಾಹರಣಾರ್ಥವಾಗಿ, ನಾನು ೧, ೨, ೩ ಅಂದರೆ ನೀನು ೩, ೨, ೧ ಅನ್ನಬೇಕು, ತಿಳಿಯಿತೇನು?"

"ಈಗ ತಯಾರಾಗು. ಲಕ್ಷ್ಯಗೊಟ್ಟು ಕೇಳು ಮತ್ತು ಸರಿಯಾಗಿ ತಿರುವು ಮುರುವು ಅನ್ನಲಿಕ್ಕೆ ತಪ್ಪಬೇಡ."

೨—೮—೩; ೪—೨—೭; ೯—೫—೮.

ಹುಡುಗನು ಅಂಕೆಗಳನ್ನು ತಿರುವು ಮುರುವು ಅನ್ನದೇ ಕೊಟ್ಟ ಕ್ರಮದಲ್ಲೇ ತಿರುಗಿ ಅನ್ನಲಿಕ್ಕೆ ಹತ್ತಿದರೆ ಹುಡುಗನಿಗೆ ಉದ್ದೇಶಿಸುವ ಮೇಲಿನ ವಾಕ್ಯಗಳನ್ನು ತಿರುಗಿ "ತಿರುವು ಮುರುವು" ಈ ಶಬ್ದದ ಮೇಲೆ ಆಘಾತವನ್ನು ಕೊಟ್ಟು ಅನ್ನಬೇಕು.

**ಪ್ರಶ್ನೆ ೪.**—ವಾರದೊಳಗಿನ ದಿವಸಗಳ ಹೆಸರು ಹೇಳುವದು (ಕ್ರಮ ಸರಿ. ೧೫ ಸೆಕಂಡು. ೩ರಲ್ಲಿ ೨ ತಪಾಸಣಿಗಳು ಸಮ).

"ನಿನಗೆ ವಾರದೊಳಗಿನ ದಿವಸಗಳು ಗೊತ್ತವೆಯಲ್ಲವೆ? ಈಗ ವಾರದೊಳಗಿನ ದಿವಸಗಳನ್ನು ಹೇಳು, ನೋಡೋಣ."

ಹುಡುಗನಿಗೆ ಪ್ರಶ್ನೆಯು ಸರಿಯಾಗಿ ತಿಳಿಯದೆ ಅವನು ಸಿಕ್ಕ ಸಿಕ್ಕಂತೆ ತಪ್ಪು ಉತ್ತರ ಕೊಡಲಿಕ್ಕೆ ಹತ್ತಿದರೆ ಎರಡನೇ ಸಾರಿ ಕೆಳಗಿನಂತೆ ಅನ್ನಬೇಕು—

"ಅಲ್ಲ, ಹಾಗಲ್ಲ. ವಾರದೊಳಗಿನ ದಿವಸಗಳ ಹೆಸರು ಹೇಳು."

ಹುಡುಗನ ಉತ್ತರ ಕೊಡುವದು ಆದ ಬಳಿಕ ಮುಂದೆ ಕೆಳಗಿನಂತೆ ತಪಾಸಣಿ ಮಾಡಬೇಕು—

"ಮಂಗಳವಾರದ ಮೊದಲು (ಮುಂಚೆ) ಯಾವ ವಾರ ಬರುತ್ತದೆ?"

"ಗುರುವಾರ (ಬೃಹಸ್ಪತಿವಾರ)ದ ಮೊದಲು ಯಾವ ವಾರ ಬರುತ್ತದೆ?"

"ಶುಕ್ರವಾರದ ಮೊದಲು ಯಾವ ವಾರ ಬರುತ್ತದೆ?"

**ಪ್ರಶ್ನೆ ೫.**—೨೦ರಿಂದ ೧ರ ವರೆಗೆ ಅಂಕೆಗಳನ್ನು ತಿರುವು ಮುರುವು ಎಣಿಸುವದು (೪೦ ಸೆಕಂಡು. ೧ ತಪ್ಪು ಮಾಫ).

"ನಿನಗೆ ೧ರಿಂದ ೨೦ರ ವರೆಗೆ ಎಣಿಸಲಿಕ್ಕೆ ಬರುತ್ತದೆ, ಅಹುದಲ್ಲ? ಈಗ ಎಣಿಸು ನೋಡೋಣ."

ಹುಡುಗನದು ಆದ ಮೇಲೆ ಕೆಳಗಿನಂತೆ ಮುಂದೆ ಅನ್ನಬೇಕು—

"ಈಗ ೨೦—೧೯—೧೮—ಹೀಗೆ ತಿರುವು ಮುರುವು ಎಣಿಸು, ನೋಡೋಣ."

ಹುಡುಗನು ತನಗೆ ಬರುವದಿಲ್ಲ ಎಂದು ಹೇಳಲಿಕ್ಕೆ ಹತ್ತಿದರೆ ಅವನಿಗೆ ಉತ್ತೇಜನ ಕೊಟ್ಟು ಕೆಳಗಿನಂತೆ ಅನ್ನಬೇಕು—

"ನಿನಗೆ ಚಲೋ ಎಣಿಸಲಿಕ್ಕೆ ಬರುತ್ತದೆ, ನನಗೆ ಗೊತ್ತಿದೆ. ಈಗ ಎಣಿಸು."

ಎಷ್ಟೋ ಸಾರಿ ಒಮ್ಮೆ ಹುಡುಗನು ಆರಂಭಮಾಡಿದನಂದರೆ ಅವನು ಕಡೆತನಕ ಸರಿಯಾಗಿ ಎಣಿಸುತ್ತಾನೆ.

**ಪ್ರಶ್ನೆ ೬.**—ನೆನಪಿನಿಂದ ಹೆಚ್ಚು ಕಡಿಮೆಯನ್ನು ಹೇಳುವದು (೩ರಲ್ಲಿ ೨. ಪ್ರತಿಯೊಂದಕ್ಕೆ ೧ ಮಿನೀಟು).

"ನೊಣ ಮತ್ತು ಪಾತರಗಿತ್ತಿ—ಇವುಗಳೊಳಗಿನ ಹೆಚ್ಚು ಕಡಿಮೆ ಏನು?"

ಹುಡುಗನಿಗೆ ಈ ಪ್ರಶ್ನೆ ತಿಳಿಯಲಿಲ್ಲ ಎಂದು ಕಂಡುಬಂದರೆ ಮುಂದೆ ಕೆಳಗಿನಂತೆ ಅನ್ನಬೇಕು—

"ನಿನಗೆ ನೊಣಗಳೆಂದರೆ ಏನು ಗೊತ್ತಿದೆಯಲ್ಲವೆ? ನೀನು ನೊಣಗಳನ್ನು ನೋಡಿದ್ದೀ? ಮತ್ತು ನಿನಗೆ ಪಾತರಗಿತ್ತಿಗಳೆಂದರೇನು ಗೊತ್ತದೆ

ಯಷ್ಟೇ? ಈಗ ನನಗೆ ನೊಣ ಮತ್ತು ಪಾತರಗಿತ್ತಿ—ಇವುಗಳೊಳಗಿನ ಹೆಚ್ಚು ಕಡಿಮೆಯನ್ನು ಹೇಳು, ನೋಡೋಣ."

"ಇವು ಬೇರೆ ಬೇರೆ ಯಾವ ರೀತಿಯಿಂದ?"

ಇದರಂತೆಯೇ, ಕಲ್ಲು ಮತ್ತು ಬಟಾಟೆ (ಆಲುಗಡ್ಡೆ), ಕಟ್ಟಿಗೆ ಮತ್ತು ಕಾಜು.

ಮೇಲಿನ ಪ್ರಶ್ನೆಗಳ ಹೊರತು ಬೇರೆ ಯಾವ ತರದ ಪ್ರಶ್ನೆಗಳನ್ನೂ ಕೇಳಬಾರದು. ಇಂಥ ಪ್ರಶ್ನೆಗಳು ಹುಡುಗರಿಗೆ ಸೂಚಕ ಪ್ರಶ್ನೆಗಳಾಗ ಬಹುದು.

ಹುಡುಗನು "ಒಂದು ದೊಡ್ಡದು ಒಂದು ಸಣ್ಣದು" ಅಥವಾ "ಒಂದು ಘಟ್ಟಿ ಒಂದು ಮಿದುವು" ಅಂದರೆ "ಯಾವದು ದೊಡ್ಡದು (ಅಥವಾ ಘಟ್ಟಿ)" ಎಂದು ಕೇಳಬಹುದು.

ಹುಡುಗರ ಉತ್ತರಗಳು—

ಸಮ

(ಅ) ಪಾತರಗಿತ್ತಿ ದೊಡ್ಡವಿರುತ್ತವೆ, ನೊಣ ಸಣ್ಣವಿರುತ್ತವೆ; ನೊಣ ಕರೇವು ಇರುತ್ತವೆ, ಪಾತರಗಿತ್ತಿ ಬಿಳೇವು ಇರುತ್ತವೆ; ಪಾತರಗಿತ್ತಿ ಬಹಳ ಹಾರುತ್ತವೆ, ನೊಣ ಬಹಳ ಹಾರುವದಿಲ್ಲ; ಪಾತರಗಿತ್ತಿ ಮೇಲೆ ಹೋಗು ತ್ತದೆ, ನೊಣ ಕೆಳಗೆ ಇರುತ್ತದೆ.

(ಬ) ಕಲ್ಲು ರಸ್ತೆಯೊಳಗೆ ಬೀಳುತ್ತದೆ, ಪಲ್ಲೆಗೆ ಹಾಕುವದಿಲ್ಲ, ಬಟಾಟೆ ಪಲ್ಲೆಗೆ ಹಾಕುತ್ತಾರೆ; ಬಟಾಟೆ ದುಂಡಗೆ ಇರುತ್ತದೆ, ಕಲ್ಲು ಚಪ್ಪಟೆ ಯಾಗಿರುತ್ತದೆ; ಕಲ್ಲಿನ ಪಲ್ಲೆ ಮಾಡುವುದಿಲ್ಲ, ಬಟಾಟೆಯ ಪಲ್ಲೆ ಮಾಡು ತ್ತಾರೆ; ಕಲ್ಲು ಘಟ್ಟಿ ಇರುತ್ತವೆ, ಬಟಾಟೆಗೆ ಸಿಪ್ಪೆ ಇರುತ್ತವೆ; ಬಟಾಟೆ ಹೆಚ್ಚಲಿಕ್ಕೆ ಬರುತ್ತದೆ, ಕಲ್ಲು ಹೆಚ್ಚಲಿಕ್ಕೆ ಬರುವದಿಲ್ಲ; ಕಲ್ಲು ಒಗೆದರೆ ಪೆಟ್ಟು ಹತ್ತುತ್ತದೆ, ಬಟಾಟೆ ಒಗೆದರೆ ಪೆಟ್ಟು ಹತ್ತುವದಿಲ್ಲ; ಕಲ್ಲು ಘಟ್ಟಿ ಇರುತ್ತದೆ, ಬಟಾಟೆ ಘಟ್ಟಿ ಇರುವದಿಲ್ಲ; ಕಲ್ಲು ಒಜ್ಜೆ, ಬಟಾಟೆ ಹಗುರ; ಬಟಾಟೆ ತಿನ್ನುತ್ತಾರೆ, ಕಲ್ಲು ತಿನ್ನುವುದಿಲ್ಲ; ಕಲ್ಲು ಆಡಲಿಕ್ಕೆ ಬರುತ್ತವೆ, ಬಟಾಟೆ ಪಲ್ಲೆ ಮಾಡಲಿಕ್ಕೆ ಬರುತ್ತದೆ; ಕಲ್ಲು ಹುರುಬುರುಕು ಇರುತ್ತವೆ, ಬಟಾಟೆ ಸಾಫ ಇರುತ್ತದೆ.

(ಕ) ಕಟ್ಟಿಗೆ ಒಲೆಯೊಳಗೆ ಹಾಕುತ್ತಾರೆ, ಕಾಜು ಚಲ್ಲಿ ಬಿಡುತ್ತಾರೆ; ಕನ್ನಡಿಯೊಳಗೆ ನೋಡುತ್ತಾರೆ, ಕಟ್ಟಿಗೆಯ ಬೆಂಕಿ ಮಾಡುತ್ತಾರೆ; ಕಟ್ಟಿಗೆ ಸಟ್ಟರೆ ಅಷ್ಟು ನೋವು ಆಗುವದಿಲ್ಲ, ಕಾಜು ಸಟ್ಟರೆ ನೋವು ಆಗುತ್ತದೆ; ಕಟ್ಟಿಗೆ ಸುಡಲಿಕ್ಕೆ ಸಿಗುತ್ತವೆ, ಕಾಜು ಸುಡಲಿಕ್ಕೆ ಸಿಗುವದಿಲ್ಲ; ಕಾಜು ಒಗೆದರೆ ಕಾಲಿಗೆ ರಕ್ತ ಬರುತ್ತದೆ, ಕಲ್ಲು ಒಗೆದರೆ ತರಿಯುತ್ತದೆ; ಕಾಜಿನೊಳಗಿಂದ ಹೀಗೆ ನೋಡಿದರೆ ಕಾಣಿಸುತ್ತದೆ, ಕಟ್ಟಿಗೆಯೊಳಗಿಂದ ಕಾಣಿಸುವದಿಲ್ಲ.

ತಪ್ಪು

(ಅ) ನೊಣ ಹಾರುತ್ತವೆ, ಪಾತರಗಿತ್ತಿ ಗಿಡದ ಮೇಲೆ ಕೂಡ್ರುತ್ತವೆ; ನೊಣ ಕಡಿಮೆ, ಪಾತರಗಿತ್ತಿ ಹೆಚ್ಚು.

(ಬ) ಕಲ್ಲು ಸಣ್ಣದು, ಬಟಾಟೆ ದೊಡ್ಡದು; ಕಲ್ಲು ದೊಡ್ಡದು, ಬಟಾಟೆ ಸಣ್ಣದು; ಕಲ್ಲು ಬಿಳೀವು, ಕೆಂಪು, ಬಟಾಟೆ ಹಳದೀ, ಬಿಳೀವು; ಕಲ್ಲು ಹೆಚ್ಚು, ಬಟಾಟೆ ಕಡಿಮೆ.

(ಕ) ಕಟ್ಟಿಗೆ ಉದ್ದ ಇರುತ್ತದೆ, ಕಾಜು ಸಾಫ ಇರುತ್ತದೆ; ಕಟ್ಟಿಗೆ ಉದ್ದ ಇರುತ್ತದೆ, ಕಾಜು ಅಗಲ ಇರುತ್ತದೆ; ಕಾಜು ಬಿಳೀದು ಇರುತ್ತದೆ, ಕಟ್ಟಿಗೆ ಉದ್ದ ಇರುತ್ತದೆ; ಕಟ್ಟಿಗೆ ಒಜ್ಜೆ, ಕಾಜು ಹಗುರ; ಕಟ್ಟಿಗೆ ಉದ್ದ ಇರುತ್ತವೆ, ಕಾಜು ಉದ್ದವಿರುವದಿಲ್ಲ; ಕಟ್ಟಿಗೆ ಉರಿ ಹಚ್ಚಲಿಕ್ಕೆ ಬರುತ್ತದೆ, ಕಾಜು ಆಡಲಿಕ್ಕೆ ಬರುತ್ತದೆ; ಕಟ್ಟಿಗೆ ಕರೇವು, ಕಾಜು ಬಿಳೀವು; ಕಾಜು ಹೆಚ್ಚು, ಕಟ್ಟಿಗೆ ಕಡಿಮೆ; ಕಾಜು ಬಿಳೀವು, ಕಟ್ಟಿಗೆ ಕೆಂಪು; ಕಾಜು ದುಂಡಗೆ ಅಥವಾ ಚಚ್ಚೌಕ ಇರುತ್ತವೆ, ಕಟ್ಟಿಗೆ ಉದ್ದಕೆ ಇರುತ್ತವೆ.

**ನೈಕಲ್ಪಿಕ ಪ್ರಶ್ನೆ.**—ತಾರೀಖು ಮತ್ತು ವಾರದ ಹೆಸರನ್ನು ಹೇಳುವದು (ಎರಡೂ ಸರಿ; ಆದರೆ ತಾರೀಖಿನಲ್ಲಿ ೩ ದಿವಸಗಳ ತನಕ ಹೆಚ್ಚು ಕಡಿಮೆ ಹೇಳಿದರೂ ಸರಿಯೆಂದು ತಿಳಿಯಬೇಕು).

(ಅ) "ಈ ಹೊತ್ತು ವಾರ ಯಾವದು?"

(ಬ) "ಈ ಹೊತ್ತು ಯಾವ ತಾರೀಖು?"

ಹುಡುಗನು ತನಗೆ ತಾರೀಖು ಗೊತ್ತಿಲ್ಲ ಎಂದು ಹೇಳಿದರೆ, ಅವನಿಗೆ— "ಅಜಮಾಸು ಹೇಳು" ಎಂದು ಅನ್ನಬೇಕು.

## ವರ್ಷ ೮

**ಪ್ರಶ್ನೆ ೧.**—ನಾಣ್ಯಗಳ ಬೆಲೆ ಹೇಳುವದು (೧೫ ಸೆಕಂಡು).

ಮೂರು ಒಂದಾಣೆಯ ನಾಣ್ಯಗಳನ್ನೂ ಮೂರು ಎರಡಾಣೆಯ ನಾಣ್ಯಗಳನ್ನೂ (ಎಲ್ಲ ನಿಕಲ ಧಾತುವಿನವು) ಹುಡುಗನ ಎದುರಿಗೆ ಟೇಬಲಿನ ಮೇಲೆ ಸಾಲಾಗಿ ೧ ೧ ೧ ೨ ೨ ೨—ಈ ಕ್ರಮದಲ್ಲಿ ಇಡಬೇಕು. ಮುಂದೆ ಹೀಗೆ ಅನ್ನಬೇಕು—

"ನಿನಗೆ ಇದೇನು ಗೊತ್ತದೆ (ಒಂದಾಣೆಯ ನಾಣ್ಯದ ಕಡೆಗೆ ಬೆರಳು ಮಾಡಿ)."

"ಮತ್ತು ಇದೂ ಗೊತ್ತದೆ (ಎರಡಾಣೆಯ ನಾಣ್ಯದ ಕಡೆಗೆ ಬೆರಳು ಮಾಡಿ)."

"ಈಗ ಇವೆಲ್ಲ ನಾಣ್ಯಗಳ ಬೆಲೆ ಎಷ್ಟು ಹೇಳು."

**ಪ್ರಶ್ನೆ ೨.**—ಐದು ಅಂಕೆಗಳನ್ನು ಮತ್ತೆ ಅನ್ನುವದು (೩ರಲ್ಲಿ ೧. ಸೆಕಂಡಿಗೆ ಒಂದರಂತೆ ಓದಬೇಕು).

ಹುಡುಗನ ಲಕ್ಷ್ಯವನ್ನು ಎಳಕೊಂಡ ಮೇಲೆ ಕೆಳಗಿನ ಅಂಕೆಗಳನ್ನು ಸ್ವಚ್ಛವಾಗಿ ಸೆಕಂಡಿಗೆ ಸುಮಾರು ಒಂದರಂತೆ ಒಂದೇ ವೇಗದಿಂದ ಓದಿ ಹೇಳಬೇಕು. ಹಾಡಿನ ಪದ್ಧತಿಯಿಂದ ಅಥವಾ ವೇಗವನ್ನು ಹೆಚ್ಚು ಕಡಿಮೆಮಾಡಿ ಓದಬಾರದು. ಏಳು ವರ್ಷದ ವಯಸ್ಸಿನ ಮೇಲೆ ಯಾವ ಅಂಕಮಾಲೆಯನ್ನೂ ತಿರುಗಿ ಓದಿ ಹೇಳಬಾರದು. ಏಳು ವರ್ಷದ ಕೆಳಗಿನ ಹುಡುಗರು ಚಂಚಲ ಲಕ್ಷ್ಯದವರು ಇರುವಕಾರಣ ಅವರ ದೆಸೆಯಿಂದ ಮೊದಲನೇ ಅಂಕಮಾಲೆಯನ್ನು ಎರಡನೇ ಸಾರಿ ಓದಿಹೇಳಲಿಕ್ಕೆ ಅನುಮತಿ ಕೊಟ್ಟಿತ್ತು. ಆದರೆ ಇಂಥ ವೇಳೆಯಲ್ಲಿ ಅವರ ಉತ್ತರವು ಸರಿಯೆಂದು ಎಣಿಸಲ್ಪಡುತ್ತಿದ್ದಿಲ್ಲ.

೩—೧—೭—೫—೯; ೪—೨—೮—೩—೫; ೯—೮—೧—೭—೬.

**ಪ್ರಶ್ನೆ ೩.**—ಗ್ರಹಿಸುವದು—೩ನೆಯ ತರಗತಿ (೩ರಲ್ಲಿ ೨. ಒಮ್ಮೆ ಓದಿ

೫ರಿಂದ ೧೦ ಸೆಕಂಡು ಬಿಡಬೇಕು. ಮುಂದೆ ಎರಡನೇ ಸಾರಿ ಓದಿ ೩೦ ಸೆಕಂಡಿನ ತನಕ ಅವಕಾಶ ಕೊಡಬೇಕು).

(ಅ) "ಬೇರೆಯುವನ (ಬೇರೆ ಹುಡುಗನ) ಒಂದು ವಸ್ತುವನ್ನು ನೀನು ಒಡೆದರೆ ನೀನು ಏನು ಮಾಡಬೇಕು?"

(ಬ) "ನೀನು ಸಾಲೆಗೆ ನಡೆದಿದ್ದೀ ಮತ್ತು ನಿನಗೆ ತಡ ಆಗುವ ಸಂಭವ ಅದೆ ಅಂತ ನಿನಗೆ ಅನಿಸಿದರೆ ನೀನು ಏನು ಮಾಡಬೇಕು?"

(ಕ) "ಒಬ್ಬ ನಿನ್ನ ಆಟದ ಗೆಳೆಯನು (ಗೆಳತಿಯು) ನಿನಗೆ ತಪ್ಪಿ ಬಡಿದರೆ ನೀನು ಏನು ಮಾಡಬೇಕು?"

ಪ್ರಶ್ನೆಯನ್ನು ತಿರುಗಿ ಕೇಳುವ ಮುಂದೆ ಅದರೊಳಗಿನ ಶಬ್ದಗಳನ್ನು ಎಂದೂ ಬದಲಿಸಬಾರದು.

ಹುಡುಗರ ಉತ್ತರಗಳು—

ಸಮ

(ಅ) ಕೊಡಬೇಕು ಅವನಿಗೆ; ಮತ್ತೊಂದು ಕೊಡಬೇಕು ಇಲ್ಲವೆ ರೊಕ್ಕ ಕೊಡಬೇಕು; ನಾವು ತಂದು ಕೊಡಬೇಕು; ಕೈಲೆ ಕೊಡಬೇಕು; ಮತ್ತು ಘಾಡಿಸಬೇಕು; ನಾನು ಅದನ್ನು ಜೋಡಿಸಬೇಕು.

(ಬ) ಓಡಿ ಹೋಗಬೇಕು; ಬೇಗ ಹೋಗುತ್ತೇನೆ.

(ಕ) ಅವಳಿಗೆ ಬಡಿಯಬಾರದು; ಹಾಗೆ ಹೊಡೆಯಬಾರದು ಎಂದು ಹೇಳಬೇಕು; ಸುಮ್ಮನೆ ಇರಬೇಕು; ಒಂದು ಸಾರಿ ಬಿಟ್ಟುಬಿಡಬೇಕು; ಅವನಿಗೆ ಏನೂ ಮಾಡುವದಿಲ್ಲ; ನಾನು ತಡಕೊಳ್ಳಬೇಕು; ಕ್ಷಮಿಸಬೇಕು.

ತಪ್ಪು

(ಅ) ಬೈಯಿಸಿಕೊಳ್ಳಬೇಕು; ಹೊಡೆಯಬೇಕು; ಅವನ ಕಡೆಯಿಂದ ರೊಕ್ಕ ಇಸಕೊಂಡು ನಾವು ಕೊಳ್ಳಬೇಕು; ಮನೆಯೊಳಗೆ ಸಿಟ್ಟುಮಾಡಿ ಹೊಡೆಯುತ್ತಾರೆ; ಅವನ ಕಡೆಯಿಂದ ಬೇಡಬೇಕು; ಏನಾದರೂ ಉಪಯೋಗ ಮಾಡಬೇಕು; ಒಡೆದು ನೋಡಬೇಕು; ನಮಗೆ ನಾಚಿಕೆ ಹುಟ್ಟುತ್ತದೆ; ಸರಕಾರಕ್ಕೆ ಕೊಡಬೇಕು; ನಮಗೆ ಹೊಡೆಯುತ್ತಾರೆ; ನಮಗೆ ದುಃಖ ಆಗುತ್ತದೆರಿ.

(ಬ) ಹೋಗುವದಿಲ್ಲ; ಮಾಸ್ತರರು ಹೊಡೆಯುತ್ತಾರೆ ಎಂತ ಚಿಂತೆ ಆಗುತ್ತದೆ; ಮಾಸ್ತರರಿಗೆ ಹೇಳಬೇಕು; ನಾನು ಬರಲಿಕ್ಕೆ ಆಗುವದಿಲ್ಲ; ಆ ಹೊತ್ತು ಒಂದು ದಿವಸ ಸಾಲೆ ಬಿಡಬೇಕು; ಹೊರಗೆ ಹಾಕುತ್ತಾರೆ; ಅಡಿಗೆ ಆಗಲಿಕ್ಕೆ ಬಹಳ ತಡ ಆಗಿದೆ; ತಡ ಆದರೆ ಚಿಂತೆ ಇಲ್ಲ, ಸಾಲೆಗೆ ಬೇಕಾದರೆ ಬರಬೇಕು.

(ಕ) ನಾನು ತಿರುಗಿ ಹೊಡೆಯುತ್ತೇನೆ; ಅಳಬಾರದು; ಹೊಡೆಯಬೇಕು; ಯಾಕೆ ಹೊಡೆದಿ ಎಂದು ಕೇಳಬೇಕು; ಅದನ್ನು ಔಷಧ ಹಚ್ಚಿಕೊಂಡು ನಾವು ಇದು ಮಾಡಬೇಕು; ಆಟ ಬಿಡಬೇಕು; ನಾನು ಅವರ ಮನೆಯವರ ಮುಂದೆ ಹೇಳಬೇಕು; ನಾವು ಮಾಸ್ತರರ ಮುಂದೆ ಹೇಳಬೇಕು; ಯಾತಕ್ಕೆ ಬಡಿದಿ ಎಂತ ಕೇಳಬೇಕು; ಅಳಬೇಕು; ಮುಟ್ಟಬೇಕು; ಮನೆಗೆ ಹೋಗಬೇಕು; ನಾನು ಅಲ್ಲ ಅನ್ನಬೇಕು.

**ಪ್ರಶ್ನೆ ೪.**—ಉಪಯೋಗಕ್ಕಿಂತ ಹೆಚ್ಚಿನ ದೃಷ್ಟಿಯಿಂದ ವ್ಯಾಖ್ಯೆಯನ್ನು ಹೇಳುವದು (೪ರಲ್ಲಿ ೨. ಪ್ರತಿಯೊಂದಕ್ಕೆ ೧ ಮಿನೀಟು).

(ಅ) "ವಿಮಾನ ಅಂದರೇನು?"

(ಬ) "ಹುಲಿ ಅಂದರೇನು?"

(ಕ) "ಫೂಟಬಾಲ (ಚಂಡು) ಅಂದರೇನು?"

(ಡ) "ಸಿಪಾಯಿ ಅಂದರೇನು?"

ಹುಡುಗಿಯರ ವಿಷಯದಲ್ಲಿ "ಫೂಟಬಾಲ" ಈ ಶಬ್ದದ ಬದಲಾಗಿ "ಚಂಡು" ಈ ಶಬ್ದವನ್ನು ಉಪಯೋಗಿಸುವದು ಒಳ್ಳೆಯದು. ಎಷ್ಟೋ ಹುಡುಗಿಯರಿಗೆ ಫೂಟಬಾಲದ ಮಾಹಿತಿ ಇರುವದಿಲ್ಲ.

ಹುಡುಗರ ಉತ್ತರಗಳು—

ಸಮ

(ಅ) ಮೇಲೆ ಅಡ್ಡಾಡುತ್ತದೆ ಅದಕ್ಕೆ; ಅದರೊಳಗೆ ಮೇಲೆ ಕೂತುಕೊಂಡು ಎರಡನೇ ದೇಶಕ್ಕೆ ಹೋಗುತ್ತಾರೆ ಅಂತೆ; ಎರಡೂ ಕಡೆಗೆ ರೆಕ್ಕೆ ಇರುತ್ತವೆ—ಮುಂದೆ ತಿರುಗುವದು ಇರುತ್ತದೆ—ಹಿಂದೆ ಮುಂದಾಸ ಹಾಗೆ ಇರುತ್ತದೆ—ಅದಕ್ಕೆ ವಿಮಾನ ಅನ್ನುತ್ತಾರೆ; ಯಂತ್ರ ಇರುತ್ತವೆ ಅದರಿಂದ ಮೇಲಿಂದ ಹಾರಿ ಬರುತ್ತವೆ; ಅದು ಕಬ್ಬಿಣದು ಇರುತ್ತದೆ,

ಮನುಷ್ಯರು ಕೂತು ಹೊಡೆಯುತ್ತಾರೆ, ಹದ್ದಿನ ಹಾಗೆ ಇರುತ್ತದೆ; ಅದು ಒಂದು ಮೋಟರದಂಥಾದ್ದು; ಮೇಲೆ ಹಾರುವಂಥ ಗಾಡಿಗೆ ವಿಮಾನ ಅನ್ನುತ್ತಾರೆ.

(ಬ) ಅದು ಒಂದು ಜಾತಿಯ ಪ್ರಾಣಿ; ಮೂಕಪ್ರಾಣಿ—ಅಡವಿಯೊಳಗೆ ಕಾಗೆ ನರಿ ಕೊಂದು ತಿಂದುಬಿಡುತ್ತದೆ; ಮೈಮೇಲೆ ಕರೇ ಪಟ್ಟಿ ಪಟ್ಟಿ ಇರುತ್ತವೆ ಅದಕ್ಕೆ ಹುಲಿ ಅನ್ನುತ್ತಾರೆ; ಅಡವಿಯೊಳಗೆ ಇರುತ್ತವೆ—ಎತ್ತಿಗೆ ತಿನ್ನುತ್ತವೆ; ಅದು ಅಡವಿಯೊಳಗೆ ಇರುತ್ತದೆ—ನಮ್ಮಂಥವರು ಯಾರಾದರೂ ಹೋದರೆ ತಿನ್ನುತ್ತದೆ; ನಮಗೆ ಕೊಂದು ತಿನ್ನುವಂಥ ಪಶು; ಕಾಡುಮೃಗ; ಅದು ಒಂದು ಪ್ರಾಣಿ ಇರುತ್ತದೆ.

(ಕ) ದೊಡ್ಡ ಚಂಡು; ಅಗದೀ ಲಠ್ಠ ಇರುತ್ತದೆ, ದುಂಡ ಇರುತ್ತದೆ; ಕಾಲಲೆ ಅದನ್ನು ಮೇಲೆ ಹೊಡೆಯುತ್ತಾರೆ; ಮೇಲೆ ತೊಗಲು ಹಾಗೆ ಇರುತ್ತದೆ—ಒಳಗೆ ರಬ್ಬರ ಅಂಥಾದ್ದು ಇರುತ್ತದೆ—ಗಾಳಿ ತುಂಬಿ ಹೊಡೆಯುತ್ತಾರೆರಿ; ಚಂಡಿನ ಹಾಗೆ ದೊಡ್ಡದಿರುತ್ತದೆ—ಆಡುವದು; ಒಂದು ಇಂಥ ದೊಡ್ಡ ಚಂಡು ಇರುತ್ತದೆರಿ; ಚಂಡು ಆಡುವದು—ಕಾಲಲೆ ಒದೆಯುವದು.

(ಡ) ಪೋಲೀಸ, ಹಿಡಕೊಂಡು ಹೋಗುವವರು; ಊರೊಳಗೆ ದಂಗೆ ತುಡುಗ ಆಗಬಾರದೆಂತ ಅವರನ್ನು ಇಟ್ಟಿರುತ್ತಾರೆ; ಕಳವು ಜಿಳವು ಆದರೆ ಹಿಡಿಯುವವರು; ಕೈಕೆಳಗಿನ ಆಳು; ಸರಕಾರದವರು ಊರೊಳಗೆ ಧಾಂದಲೆ ಆಗಬಾರದೆಂದು ಒಂದೊಂದು ಖೂಟಿಗೆ ಒಬ್ಬೊಬ್ಬ ಸಿಪಾಯರು ಇರುತ್ತಾರೆ; ಸರಕಾರದ್ದು ಕೆಲಸಮಾಡುವವರು; ಕಾಲಾಗೆ ಬೂಟ ಹಾಕಿ ಖಾಕಿ ಡ್ರೇಸ ಹಾಕಿ ಕೈಯೊಳಗೆ ಬಂದೂಕು ಹಿಡಿಯುತ್ತಾರೆ; ಅವರು ಮನುಷ್ಯರು ಇರುತ್ತಾರೆ—ಹಿಂದಗಡೆ ಸಿಪಾಯರು ಆಗುತ್ತಾರೆ—ಪರದೇಶಿ ಅಂಗಿ ಹಾಕಿಕೊಳ್ಳುತ್ತಾರೆ; ಕಚೇರಿಯೊಳಗೆ ಇರುತ್ತಾರೆ—ಯಾರಾದರೂ ಜಗಳಾ ಮಾಡಿದರೆ ನೋಡುತ್ತಾರೆ—ದೇಶೀ ಚಳವಳಿ ಆದರೆ ನೋಡುತ್ತಾರೆ; ಕೆಲಸಮಾಡುವವನು; ಕಳ್ಳರನ್ನು ಹಿಡಿದುಕೊಂಡು ಬರುವದು, ರಾತ್ರಿ ಗದ್ದಲ ಆಗದ ಹಾಗೆ ಗಸ್ತಿ ತಿರುಗುವದು; ಕಳ್ಳರನ್ನು ಹಿಡಿಯುವವರಿಗೆ.

ತಪ್ಪು

(ಅ) ಮೇಲೆ ಹಾರಾಡುತ್ತದೆ; ಮೇಲೆ ಹೋಗುತ್ತದೆ; ಜನರು ಕೂಡ್ರುವದು; ಭೊಂವ್ ಅನ್ನುತ್ತಿರುತ್ತದೆ; ಮನುಷ್ಯರು ಕೂತುಕೊಂಡು ಹೋಗುತ್ತಾರೆ.

(ಬ) ಅದು ಮನುಷ್ಯರನ್ನು ತಿನ್ನುತ್ತದೆ; ಕಡಿಯುವವು; ಮನುಷ್ಯರು ಬಣ್ಣ ಹಚ್ಚಿಕೊಂಡು ಇರುತ್ತಾರೆ; ಅಡವಿಯೊಳಗೆ ಹುಲಿ ಇರುತ್ತವೆ.

(ಕ) ಅದರಿಂದ ಆಡುತ್ತಾರೆ; ಗಂಡು ಹುಡುಗರು ಆಡುತ್ತಾರೆ; ದೊಡ್ಡವು; ಚಂಡು ಆಡುವದು; ಪುಟಿಸುವದು ಇರುತ್ತದೆ ಅಲ್ಲರಿ.

(ಡ) ಕಳ್ಳರನ್ನು ಹಿಡಿಯುತ್ತಾರೆ; ತುಡುಗ ಮಾಡಿದರೆ ಹಿಡಿಯುತ್ತಾರೆ; ಕಳವು ಮಾಡಿದವರನ್ನು ಹಿಡಕೊಂಡುಹೋಗುವದು.

**ಪ್ರಶ್ನೆ ೫.**—ಆರು ನಾಣ್ಯಗಳ ಹೆಸರು ಹೇಳುವದು (ತಪ್ಪಿಲ್ಲದೆ).

ಕೆಳಗಿನ ಕ್ರಮದಂತೆ ಕೇಳಬೇಕು—

ಆಣೆ, ಬಿಲ್ಲಿ, ರೂಪಾಯಿ, ಪಾವಲಿ (ನಾಲ್ಕು ಆಣೆ), ಅರ್ಧ ರೂಪಾಯಿ, ಚವಲಿ (ಎರಡು ಆಣೆ).

(ವರ್ಷ ೫, ಪ್ರಶ್ನೆ ೫ರಂತೆ.)

**ಪ್ರಶ್ನೆ ೬.**—ಓದುವದು ಮತ್ತು ಬಳಿಕ ರಿಪೋರ್ಟ ಕೊಡುವದು (ಎರಡು ಸಂಗತಿಗಳನ್ನು ನೆನಪಿನಲ್ಲಿಡುವದು. ಹತ್ತು ತಪ್ಪುಗಳು. ಓದಲಿಕ್ಕೆ ೨ ಮಿನೀಟು).

ಟರ್ಮನ್ನನು ತಿದ್ದುಪಡಿಮಾಡಿದ ಬಿನೇನ ಅವತರಣವು ಕೆಳಗೆ ಕೊಟ್ಟಿರುತ್ತದೆ. ಅದರೊಳಗೆ ದೇಶ ಪರಿಸ್ಥಿತಿಗೆ ಅನುಸರಿಸಿ ತಕ್ಕ ಬದಲು ಮಾಡಲ್ಪಟ್ಟಿದೆ—

ಮುಂಬಯಿ, | ಸಪ್ಟಂಬರ ೫.— | ನಿನ್ನೆ ರಾತ್ರಿ | ಪಟ್ಟಣದ | ಮಧ್ಯ ಭಾಗದಲ್ಲಿ | ಮೂರು ಮನೆಗಳು | ಸುಟ್ಟವು. | ಈ ಬೆಂಕಿಯನ್ನು ನೊಂದಿಸಲಿಕ್ಕೆ | ಬಹಳ ಹೊತ್ತು ಹಿಡಿಯಿತು. | ಐವತ್ತು ಸಾವಿರ ರೂಪಾಯಿಗಳ | ಹಾನಿ ಆಯಿತು. | ಮತ್ತು ಹದಿನೇಳು ಕುಟುಂಬಗಳಿಗೆ | ಮನೆಗಳು ಇಲ್ಲದಂತಾಯಿತು. | ಒಂದು ಮಂಚದ ಮೇಲೆ | ಮಲಗಿದ | ಹುಡುಗಿಯನ್ನು |

ಹೊರಗೆ ತರುವ ಪ್ರಯತ್ನದಲ್ಲಿ | ಒಬ್ಬ ಬೆಂಕಿಯನ್ನು ನೊಂದಿಸುವವನ | ಕೈಗಳು | ಸುಟ್ಟವು. |

ಕಾರ್ಡಿನ ಮೇಲೆ ಅಚ್ಚು ಹಾಕಿದ ಮೇಲಿನ ಉದ್ದಗೀಟು ಹಾಕದ ಅವತರಣವನ್ನು ಹುಡುಗನ ಎದುರಿಗೆ ಇಡಬೇಕು. ಈ ಕಾರ್ಡು ಬುದ್ಧಿ ಪರೀಕ್ಷಾ ಸಾಧನಗಳ ಪಾಕೀಟಿನಲ್ಲಿ ಇರುವದು.

ಮುಂದೆ ಕೆಳಗಿನಂತೆ ಅನ್ನಬೇಕು—

"ಇದನ್ನು ನೀನು ಆದಷ್ಟು ಉತ್ತಮವಾಗಿ ಓದಿ ತೋರಿಸು ನೋಡೋಣ."

ಹುಡುಗನಿಗೆ ಘಟ್ಟಿಯಾಗಿ ಓದಲಿಕ್ಕೆ ಹೇಳಬೇಕು. ಅವನಿಗೆ ಕೆಲವು ಶಬ್ದ ಓದಲಿಕ್ಕೆ ಬಾರದಿದ್ದರೆ ಸಹಾಯ ಮಾಡಬಹುದು. ಆದರೆ ಇವು ಗಳನ್ನು ತಪ್ಪು ಎಂದು ಎಣಿಸಬೇಕು.

ಒಟ್ಟು ತಪ್ಪುಗಳನ್ನೂ ಹುಡುಗನಿಗೆ ಓದಲಿಕ್ಕೆ ಹಿಡಿದ ವೇಳೆಯನ್ನೂ ಸರಿಯಾಗಿ ನೋಡಿ ಬರೆದಿಡಬೇಕು. ವೇಳೆಯನ್ನು ಸಮವಾಗಿ ನೋಡಲಿಕ್ಕೆ ಸ್ಟಾಪ ವಾಚವನ್ನು ಉಪಯೋಗಿಸುವದು ಒಳ್ಳೆಯದು. ಇದು ಸಿಗದಿದ್ದರೆ ಸೆಕಂಡಿನ ಮುಳ್ಳು ಇದ್ದಂಥ ಸಾದಾ ವಾಚವನ್ನು ಉಪಯೋಗಿಸ ಬಹುದು.

ಹುಡುಗನು ಓದಿ ಮುಗಿಸಿದ ಬಳಿಕ ಕೆಳಗಿನಂತೆ ಅನ್ನಬೇಕು—

"ಶಾಬಾಸ. ಈಗ ನೀನು ಏನು ಓದಿದಿ ಹೇಳು, ನೋಡೋಣ. ಮೊದಲಿನಿಂದ ಆರಂಭಿಸು ಮತ್ತು ಏನೇನು ನೆನಪಾಗುತ್ತದೆ ಅದನ್ನೆಲ್ಲ ಹೇಳು."

ಹುಡುಗನು ಸ್ವಲ್ಪ ಸಂಗತಿಯನ್ನು ಹೇಳಿ ನಿಂತುಬಿಟ್ಟರೆ ಮುಂದೆ ಹೀಗೆ ಅನ್ನಬೇಕು—

"ಮತ್ತೇನು? ಇದರ ಹೊರತು ಮತ್ತೇನಾದರೂ ನೆನಪಾಗುತ್ತದೆ ಯೇನು?"

ಹುಡುಗನು ಇದ್ದ ಹಾಗೆ ಶಬ್ದಶಃ ತಿರುಗಿ ಹೇಳಬೇಕೆಂದು ತಪ್ಪು ತಿಳಕೊಂಡರೆ ಕೆಳಗಿನಂತೆ ಅನ್ನಬೇಕು—

"ನಿನಗೆ ಏನೇನು ನೆನಪಾಗುತ್ತದೆಯೋ ಅದನ್ನೆಲ್ಲ ನಿನಗೆ ಬಂದ ಹಾಗೆ ಹೇಳು."

ಇದರ ಹೊರತು ಬೇರೆ ಯಾವ ತರದ ಪ್ರಶ್ನೆಗಳನ್ನು ಕೇಳಬಾರದು. ಅವನಿಗೆ ಆದಷ್ಟು ಪ್ರಯತ್ನಮಾಡಲಿಕ್ಕೆ ಉತ್ತೇಜನ ಮಾತ್ರ ಕೊಡಬೇಕು.

**ವೈಕಲ್ಪಿಕ ಪ್ರಶ್ನೆ ೧.**—ಸರಗಂಟು ಹಾಕುವದು (ನಮೂನೆಯನ್ನು ಹುಡುಗನ ಎದುರಿಗೆ ಇಡಬೇಕು. ಹೆಚ್ಚಿನ ತೊಗಲಿನ ಬಾರು. ೨ ಮಿನೀಟು).

ಫೂಟಬಾಲಿಗೆ ಉಪಯೋಗಿಸುವಂಥ ದುಂಡಾದ ತೊಗಲಿನ ಬಾರುಗಳನ್ನು ಉಪಯೋಗಿಸಬೇಕು. ಸರಗಂಟನ್ನು ಪ್ರಯೋಗದ ಮೊದಲೇ ತಯಾರಿಸಿ ಇಟ್ಟಿರಬೇಕು. ಮತ್ತು ಇಂಥ ಸಿದ್ಧಪಡಿಸಿದ ಗಂಟನ್ನೇ ಹುಡುಗನ ಎದುರಿಗೆ ಇಡಬೇಕು. ಈ ಸರಗಂಟಿನ ವಸ್ತುವಿನ ಸುತ್ತಲು ಹಾಕುವ ಬಾಯಿಯು ಚಲೋ ದೊಡ್ಡದಿರಬೇಕು ಮತ್ತು ಗಂಟಾದರೂ ಅದರೊಳಗಿನ ಬಾರಿನ ತೊಡಕುಗಳು ಸ್ಪಷ್ಟವಾಗಿ ಕಾಣಿಸುವಷ್ಟು ಸಡಿಲಾಗಿರಬೇಕು. ಮುಂದೆ ಹೀಗೆ ಅನ್ನಬೇಕು—

"ಇದು ಯಾವ ತರದ ಗಂಟು ನಿನಗೆ ಗೊತ್ತದೆಯಲ್ಲವೇ ? ಇದಕ್ಕೆ ಸರಗಂಟು ಅನ್ನುತ್ತಾರೆ. ಈಗ ಈ ಎರಡನೇ ಬಾರನ್ನು ತಕ್ಕೊಂಡು ಇಂಥ ಗಂಟನ್ನೇ ನನ್ನ ಮುಂಗೈ ಸುತ್ತಲು ಹಾಕು, ನೋಡೋಣ."

ಇದೇ ವೇಳೆಯಲ್ಲಿ ಎರಡನೇ ಬಾರನ್ನು ಹುಡುಗನ ಕೈಯೊಳಗೆ ಕೊಡಬೇಕು ಮತ್ತು ಪರೀಕ್ಷಕನು ತನ್ನ ಮುಂಗೈಯನ್ನು ಹುಡುಗನ ಎದುರಿಗೆ ಹಿಡಿಯಬೇಕು. ತಯಾರಾದ ಸರಗಂಟನ್ನೂ ಅದರ ಬಾಯಿಯನ್ನೂ (ಅಂದರೆ ದೊಡ್ಡ ವರ್ತುಲಾಕಾರ ಭಾಗವನ್ನು) ಹುಡುಗನಿಂದ ದೂರ ಆಗುವ ಹಾಗೆ ಟೇಬಲಿನ ಮೇಲೆ ಇಡಬೇಕು. ಹುಡುಗನು ಗಂಟನ್ನು ಪರೀಕ್ಷಿಸಲಿಕ್ಕೆ ಅದನ್ನು ಕೈಯೊಳಗೆ ತಕ್ಕೊಳ್ಳಬಹುದು. ಅದರ ಎರಡನೆಯ ಕಡೆಯ ಭಾಗವು ಸಾಕಷ್ಟು ಉದ್ದವಿರಬೇಕು. ಹುಡುಗನು ಗಂಟು ಹಾಕಲಿಕ್ಕೆ ಪ್ರಯತ್ನಮಾಡೇ ನೋಡಬೇಕು. ತನಗೆ ಬರುವದಿಲ್ಲ ಎಂದು ಬಿಡಬಾರದು. ಹುಡುಗನು ಹಾಕಿದ ಸರಗಂಟಿನಲ್ಲಿ ಒಮ್ಮೊಮ್ಮೆ ಎರಡನೆಯ ಕಡೆಯ ಭಾಗವು ಗಂಟಿನಕಡೆಯ ಭಾಗಕ್ಕಿಂತ ಸಣ್ಣದು ಇರುತ್ತದೆ. ಉಳಿದ ರೀತಿಯಿಂದ ಗಂಟು ಸರಿ ಇದ್ದರೆ ಇಂಥ ತಪ್ಪನ್ನು ಎಣಿಸಬಾರದು. ಹುಡುಗನು ಮುಗಿಸಿದ ಮೇಲೆ ಅವನ ಗಂಟು ಸರಿ ಇರಲಿ ಅಥವಾ ತಪ್ಪು ಇರಲಿ ಅವನಿಗೆ ಮುಂದಿನಂತೆ ಕೇಳಬೇಕು—

"ಈ ಗಂಟು ಅದರ ಹಾಗೆಯೇ ಆಯಿತೇನು?" ಗಂಟು ತಪ್ಪಿದ್ದರೆ, ವೇಳೆಯು ವಿಾರದಿದ್ದರೆ ಹುಡುಗನು ಅದನ್ನು ಸುಧಾರಿಸಬಹುದು.

**ವೈಕಲ್ಪಿಕ ಪ್ರಶ್ನೆ ೨.**—ಚಂಡು ಮತ್ತು ಬೈಲು (ಕೆಳಗಿನ ತರಗತಿ).

ಎರಡೂವರೆ ಇಂಚು ವ್ಯಾಸದ ಒಂದು ವರ್ತುಲವನ್ನು ತೆಗೆಯಬೇಕು. ಅದರ ಪರಿಘವನ್ನು ಪೂರ್ಣ ಮುಗಿಸದೆ ಹುಡುಗನ ಎದುರಿನ ಬದಿಗೆ ಸ್ವಲ್ಪ ಬಿಟ್ಟಿರಬೇಕು. ಇಂಥ ವರ್ತುಲವನ್ನು ತೆಗೆಯುವ ಉತ್ತಮ ಉಪಾಯವೆಂದರೆ, ಒಂದು ದಪ್ಪನ್ನ ಕಾರ್ಡಿನಲ್ಲಿ ಈ ಆಕಾರದ ಒಂದು ವರ್ತುಲವನ್ನು ಕತ್ತರಿಸಿಕೊಳ್ಳಬೇಕು. ಮುಂದೆ ಇದನ್ನು ಹುಡುಗನ ಉತ್ತರವನ್ನು ಬರಕೊಳ್ಳುವ ಕಾಗದದ ಮೇಲೆ ಇಟ್ಟು ಅದರ ಸುತ್ತಲು ಕೆಂಪು ಅಥವಾ ನೀಲಿ ಪೇನಸಿಲಿನಿಂದ ಗೀರಬೇಕು. ಬಾಗಿಲನ್ನು ತೋರಿಸುವದಕ್ಕಾಗಿ ಅದರಪರಿಘವನ್ನು ಪೂರ್ಣ ಮುಗಿಸದೆ ತಕ್ಕಷ್ಟು ಅಂತರವನ್ನು ಬಿಡಬೇಕು. ಈ ವರ್ತುಲದ ಗೆರೆಯು ಸಾಕಷ್ಟು ದಪ್ಪವಿರಬೇಕು. ಬೈಲಿನ ನಕಾಶೆಯನ್ನು ತೆಗೆದು ಹುಡುಗನ ಎದುರಿಗೆ ಇಟ್ಟಮೇಲೆ ಹೀಗೆ ಅನ್ನಬೇಕು—

"ನಿನ್ನ ಆಡುವ ಚಂಡು ಈ ದುಂಡಗಾದ ಬೈಲಿನಲ್ಲಿ ಎಲ್ಲಿಯೋ ಕಳೆದದೆ. ನಿನಗೆ ಅದು ಬೈಲಿನ ಯಾವ ಭಾಗದಲ್ಲಿ ಬಿದ್ದದೆ ಗೊತ್ತಿಲ್ಲ. ಅದು ಯಾವ ದಿಕ್ಕಿನಿಂದ ಬಂತು, ಹೇಗೆ ಒಳಗೆ ಹೋಯಿತು ಅಥವಾ ಎಷ್ಟು ಜೋರಿನಿಂದ ಒಳಗೆ ಹೋಯಿತು ಇದೇನೂ ಗೊತ್ತಿಲ್ಲ. ಆದರೆ ಅದು ಈ ಬೈಲಿನಲ್ಲಿಯೇ ಎಲ್ಲಿಯೋ ಕಳೆದು ಹೋಗಿದೆಯೆಂಬದು ಮಾತ್ರ ನಿಜ. ಈಗ ಈ ಪೇನಸಿಲು ತೆಗೆದುಕೊಂಡು ನೀನು ಆ ಚಂಡನ್ನು ತಪ್ಪದೆ ಹುಡುಕಲಿಕ್ಕೆ ಯಾವ ಮಾರ್ಗದಿಂದ ಹೋಗುವಿ, ಆ ಮಾರ್ಗವನ್ನು ತೆಗೆದು ತೋರಿಸು. ಇಲ್ಲಿ ಈ ಬಾಗಿಲ ಹತ್ತರದಿಂದ ಆರಂಭಿಸು ಮತ್ತು ಯಾವ ದಾರಿಯಿಂದ ಹೋಗುವಿ ಎಂಬದನ್ನು ತೋರಿಸು.'



ಮೇಲಿನ ಹುಡುಗನಿಗೆ ಉದ್ದೇಶಿಸುವ ಶಬ್ದಗಳಲ್ಲಿ ಏನೂ ಹೆಚ್ಚು ಕಡಿಮೆ ಮಾಡಬಾರದು. ವಿಶೇಷತಃ "ದುಂಡಗಿನ" ಅಥವಾ "ಸುತ್ತಲು" ಈ ಆಶಯದ ಶಬ್ದಗಳನ್ನು ಉಪಯೋಗಿಸಬಾರದು. ಯಾಕಂದರೆ, ಇದರ ಮೇಲಿಂದ ದುಂಡಗಾಗಿ ಗೆರೆಯನ್ನು ತೆಗೆ ಎಂದು ಹುಡುಗನಿಗೆ ಸೂಚನೆಯು ಸಿಗಬಹುದು. ಹುಡುಗನು ಬರೇ ಬೆರಳಿನಿಂದ ಹೋಗುವ ಹಾದಿಯನ್ನು ತೋರಿಸಲಿಕ್ಕೆ ಹತ್ತಿದರೆ ಮುಂದೆ ಹೀಗೆ ಅನ್ನಬೇಕು—

"ಹಾಗಲ್ಲ. ನಿನ್ನ ದಾರಿಯನ್ನು ನೀನು ಪೇನಸಿಲಿನಿಂದ ತೆಗೆದು ತೋರಿಸಬೇಕು, ಅಂದರೆ ನನಗೆ ಸರಿಯಾಗಿ ತಿಳಿದೀತು."

ಒಮ್ಮೊಮ್ಮೆ ಹುಡುಗನು ಸ್ವಲ್ಪ ದಾರಿಯನ್ನು ತೆಗದು ಚಂಡು ಅಲ್ಲೇ ಅದೆ ಎಂದು ತೋರಿಸಬಹುದು ಅಥವಾ ಸೂಚಿಸಬಹುದು. ಆವಾಗ್ಗೆ ಕೆಳಗಿನಂತೆ ಅನ್ನಬೇಕು—

"ಆದರೆ ನಿನಗೆ ಇನ್ನೂ ಅದು ಸಿಗಲಿಲ್ಲ ಎಂದು ತಿಳಿದುಕೋ. ಮುಂದೆ ಹೇಗೆ ಹೋಗುವಿ?" ಈ ವಾಕ್ಯಗಳನ್ನು ಎಷ್ಟೋ ಸಾರಿ ತಿರುಗಿ ತಿರುಗಿ ಹೇಳಬೇಕಾಗುವದು.

ಹುಡುಗನು ತೆಗೆದು ಮುಗಿಸಿದ ಮೇಲೆ ಅವನ ಡ್ರಾಯಿಂಗಿನಲ್ಲಿ ಏನಾದರೂ ವಿಚಾರಪೂರ್ವಕ ಹೇತು ಅದೆಯೋ ಇಲ್ಲವೋ ನೋಡ ಬೇಕು. ಅವನ ಡ್ರಾಯಿಂಗಿಗೆ ಎಂಟನೇ ವರ್ಷ ಮತ್ತು ಹದಿನಾಲ್ಕನೇ ವರ್ಷ ಹೀಗೆ ಎರಡು ವಯಸ್ಸುಗಳ ಸಲುವಾಗಿ ಗುಣಗಳನ್ನು ಕೊಡ ಬಹುದು.

**ಎಂಟನೇ ವರ್ಷಕ್ಕೆ ಬೇಕಾಗುವ ಸಂಗತಿಗಳು.**—ಈ ವರ್ಷದ ಸಲುವಾಗಿ ಹುಡುಗನ ಡ್ರಾಯಿಂಗಿನಲ್ಲಿ ತರ್ಕಶಾಸ್ತ್ರ ದೃಷ್ಟಿಯಿಂದ ಸರ್ವ ಗುಣಸಂಪನ್ನವಾದ ಹೇತುಪೂರ್ಣ ಯೋಜನೆಯು ಇಲ್ಲದಿದ್ದರೂ ಸ್ವಲ್ಪ ಮಟ್ಟಿಗೆ ಹೇತುವನ್ನು ಸೂಚಿಸುವಂಥ ಯೋಜನೆಯು ಇರಬೇಕು. ಇಂಥ ಯಾವ ತರದ ಹೇತುವೂ ಡ್ರಾಯಿಂಗಿನಲ್ಲಿ ಕಾಣದೇ ಇದ್ದರೆ ಅದು ತಪ್ಪು ಎಂದು ತಿಳಿಯಬೇಕು. ಉದಾಹರಣಾರ್ಥವಾಗಿ, ಬರೇ ಅಡ್ಡತಿಡ್ಡ ತೆಗೆದ, ಎಷ್ಟೋ ಸಾರಿ ಒಂದಕ್ಕೊಂದು ಕತ್ತರಿಸುವ ಗೆರೆಗಳೂ ಅಥವಾ ಬರೇ ಒಂದು ಸರಳ ರೇಖೆಯೂ ಅಥವಾ ಡೊಂಕ ರೇಖೆಯೂ ತಪ್ಪೆಂದು ತಿಳಿಯ ಬೇಕು. ವಿರುದ್ಧಪಕ್ಷದಲ್ಲಿ ಯಾವದೇ ರೀತಿಯಿಂದ ಚಂಡನ್ನು ಹುಡುಕಲಿಕ್ಕೆ ಮಾಡಿದ ಪ್ರಯತ್ನವನ್ನು ತೋರಿಸುವ ಹಾವಿನಂತೆ ಹೋಗುವ ಗೆರೆಯಾಗಲಿ ಅಥವಾ "ಚಕ್ರನೇಮಿಕ್ರಮದಿಂದ" ತೆಗೆದ ಗೆರೆಗಳಾಗಲಿ ಅಂದರೆ ಬೈಲಿನ ನಕಾಶೆಯ ನಡುಮಧ್ಯದಿಂದ ಆದರ ದಂಡೆಯ ಕಡೆಗೆ ತೆಗೆದ ಗೆರೆಗಳಾಗಲಿ ಅಥವಾ ಬಾಗಿಲದ ಕಡೆಯಿಂದ ವಿರುದ್ಧಬದಿಗೆ ಪೀಸಣಿಕೆಯ ಆಕಾರ ದಂತೆ ತೆಗೆದ ಗೆರೆಗಳಾಗಲಿ ಎಂಟನೇ ವರ್ಷದ ಸಲುವಾಗಿ ಸಮ ಎಂದು

ತಿಳಿಯಬೇಕು. ಇವೆಲ್ಲ ಡ್ರಾಯಿಂಗುಗಳಲ್ಲಿ ತೆಗೆದ ಗೆರೆಗಳು ಅವಿಚ್ಛಿನ್ನವಾದಂಥವೂ ಸಮಾಂತರವಾದಂಥವೂ ಇರುವದಿಲ್ಲ.

**ಹದಿನಾಲ್ಕನೇ ವರ್ಷಕ್ಕೆ ಬೇಕಾಗುವ ಸಂಗತಿಗಳು.**—ತೆಗೆದ ಗೆರೆಯು ಎಲ್ಲಿಯೂ ಹುಡುಕದೇ ಇದ್ದ ಸ್ಥಳವನ್ನು ಬಿಡದೆ ಅವಿಚ್ಛಿನ್ನವಾಗಿಯೂ ಸಮಾಂತರವಾಗಿಯೂ ಇದ್ದರೆ, ಈ ಡ್ರಾಯಿಂಗು ಹದಿನಾಲ್ಕನೇ ವರ್ಷದ ದೆಸೆಯಿಂದ ಸಮ ಎಂದು ತಿಳಿಯಬೇಕು. ಟರ್ಮನ್ನನ ಮತದ ಮೇರೆಗೆ ಇಂಥ ಉತ್ತಮ ಪ್ರಕಾರದ ಮಾರ್ಗಗಳು ಕೆಳಗೆ ತೋರಿಸಿದಂತೆ ಇರುತ್ತವೆ—

(೧) ಬಾಗಿಲ ಹತ್ತರದಿಂದ ಅಥವಾ ಜೈಲಿನ ಮಧ್ಯದಿಂದ ತೆಗೆದ ಕೋಡಬಳೆಯ ಆಕಾರದ ರಚನೆಯು.

(೨) ಏಕಕೇಂದ್ರ ವರ್ತುಲಗಳು.

(೩) ಸಮಾಂತರವಾಗಿ ಒಂದು ಬದಿಯಿಂದ ಮತ್ತೊಂದು ಬದಿಯ ಕಡೆಗೆ ತೆಗೆದ ಮತ್ತು ಎರಡೂ ಬದಿಗಳಲ್ಲಿ ಒಂದಕ್ಕೊಂದು ಜೋಡಿಸಿದ ಗೆರೆಗಳು.

ಅಚ್ಚು ಹಾಕಿದ ಮಾದರಿಯ ಮಾರ್ಗಗಳ ಸಕಾಶೆಗಳು ಉತ್ತರಗಳಿಗೆ ಗುಣಗಳನ್ನು ಕೊಡಲಿಕ್ಕೆ ಸಹಾಯ ಮಾಡಬಹುದು.

## ವರ್ಷ ೯

**ಪ್ರಶ್ನೆ ೧.**—ನಾಲ್ಕು ಅಂಕೆಗಳನ್ನು ತಿರುವು ಮುರುವು ಅನ್ನುವದು (೩ರಲ್ಲಿ ೧. ಪ್ರತಿ ಸೆಕಂಡಿಗೆ ಒಂದು ಅಂಕೆಯಂತೆ ಓದಬೇಕು).

ಈ ವರ್ಷದ ಅಂಕಮಾಲೆಗಳು ಕೆಳಗಿನಂತೆ ಇರುತ್ತವೆ—

೬—೫—೨—೮ ; ೪—೯—೩—೭ ; ೩—೬—೨—೯.

(ರೀತಿಯು ವರ್ಷ ೭, ಪ್ರಶ್ನೆ ೩ರಂತೆ.)

**ಪ್ರಶ್ನೆ ೨.**—ರೊಕ್ಕ ಮುರಿಸುವದು. (೩ರಲ್ಲಿ ೨ ಸಮ. ಪ್ರತಿಯೊಂದಕ್ಕೆ ೧೫ ಸೆಕಂಡು. ಅವಶ್ಯ ಬಿದ್ದರೆ ಒಮ್ಮೆ ಮಾತ್ರ ಎರಡನೇ ಸಾರಿ ಓದಬಹುದು).

ಲೆಕ್ಕಗಳನ್ನು ಬಾಯಿಯಿಂದ ಕೆಳಗೆ ಕೊಟ್ಟ ಕ್ರಮದಲ್ಲಿ ಕೊಡಬೇಕು—

(ಅ) " ನಾನು ೪ ರೂಪಾಯಿಯ ಅರಿವೆ ತಕ್ಕೊಂಡು ಅಂಗಡಿಗಾರನಿಗೆ ೧೦ ರೂಪಾಯಿ ಕೊಟ್ಟರೆ, ನನಗೆ ತಿರುಗಿ ಎಷ್ಟು ರೂಪಾಯಿ ಬರಬೇಕು ? "

(ಬ) " ಹನ್ನೆರಡು ರೂಪಾಯಿಯ ಅರಿವೆ ತಕ್ಕೊಂಡು ೧೫ ರೂಪಾಯಿ ಕೊಟ್ಟರೆ, ತಿರುಗಿ ಎಷ್ಟು ಬರಬೇಕು ? "

(ಕ) " ಹನ್ನೊಂದು ರೂಪಾಯದ್ದು ತಕ್ಕೊಂಡು ೨೦ ರೂಪಾಯಿ ಕೊಟ್ಟರೆ, ತಿರುಗಿ ಎಷ್ಟು ಬರಬೇಕು ? "

ಲೆಕ್ಕಗಳನ್ನು ಹುಡುಗನು ಬಾಯಿಯಿಂದಲೇ ಬಿಡಿಸಬೇಕು. ಅವನು ಎರಡು ಉತ್ತರಗಳನ್ನು ಕೊಟ್ಟರೆ ಸರ್ವಸಾಧಾರಣ ನಿಯಮದಂತೆ ಎರಡನೇದಕ್ಕೆ ಗುಣಗಳನ್ನು ಕೊಡಬೇಕು.

**ಪ್ರಶ್ನೆ ೩.**—ಸಾಮ್ಯವನ್ನು ತೋರಿಸುವದು—ಎರಡು ವಸ್ತುಗಳಲ್ಲಿ (೪ರಲ್ಲಿ ೨. ಯಾವದಾದರೊಂದು ಸರಿಯಾದ ಹೋಲಿಕೆಯು ಸಾಗಬಹುದು. ಪ್ರತಿಯೊಂದಕ್ಕೆ ೧ ಮಿನೀಟು).

ಕೆಳಗಿನಂತೆ ಹುಡುಗನಿಗೆ ಕೇಳಬೇಕು—

" ನಾನು ಈಗ ಕೆಲವು ರೀತಿಯಿಂದ ಸಮ ಇರುವಂಥ ಎರಡು ವಸ್ತು

ಗಳನ್ನು ಹೇಳುತ್ತೇನೆ. ಅವು ಯಾವ ರೀತಿಯಿಂದ ಸಮ ಅವೆ ನೀನು ನನಗೆ ಹೇಳಬೇಕು.''

(ಅ) " ಮಾವಿನಹಣ್ಣು ಮತ್ತು ಬಾಳೇಹಣ್ಣು—ಇವು ಯಾವ ರೀತಿ ಯಿಂದ ಸಮ ಅವೆ ? ''

ಇದೇ ಪ್ರಕಾರ—

(ಬ) " ಕಬ್ಬಿಣ ಮತ್ತು ಬೆಳ್ಳಿ."

(ಕ) " ಉಗಿಹಡಗ (ದೋಣಿ) ಮತ್ತು ಟಾಂಗೆ."

(ಡ) " ಕಟ್ಟಿಗೆ ಮತ್ತು ಇದ್ದಲಿ.''

ಮೊದಲನೇ ಜೋಡಿಯ ನಂತರ ಇಡೀ ವಾಕ್ಯಗಳನ್ನೂ ತಿರುಗಿ ಅನ್ನುವದು ಅವಶ್ಯವಿಲ್ಲ. ಬರೇ— "—ಮತ್ತು—ಹೇಗೆ ಸಮ ಅವೆ, ಹೇಳು " ಅಂದರೆ ಸಾಕು.

ಹುಡುಗನು ಎಷ್ಟೋ ಸಾರಿ, ಇಂಥ ಬಿಗಿ ಪ್ರಶ್ನೆಯನ್ನು ಬಿಡಿಸ ಲಿಕ್ಕೆ ಮನುಸ್ಸನ್ನು ಮಾಡಲಾರದೆ, ತನಗೆ ಗೊತ್ತಿಲ್ಲ ಅಥವಾ ಇವು ಸಮ ಇಲ್ಲ ಎಂದು ಹೇಳುತ್ತಾನೆ. ಆವಾಗ್ಗೆ ಅವನಿಗೆ ಸ್ವಲ್ಪ ಹುರುಪು ಕೊಟ್ಟು, ಕೆಳಗಿನಂತೆ ಅನ್ನಬೇಕು—

" ಇವು ಎರಡೂ ಸಮ ಅವೆ. ಅವು ಯಾವ ರೀತಿಯಿಂದ ಸಮ ಅವೆ ನೀನು ಹೇಳಬೇಕು.''

ಸಾಮ್ಯವನ್ನು ಕೊಡದೆ ವೈಷಮ್ಯವನ್ನು ಕೊಡಲಿಕ್ಕೆ ಹತ್ತಿದರೆ, ಕೆಳಗಿ ನಂತೆ ಅನ್ನಬೇಕು—

" ಹಾಗಲ್ಲ, ಇವು ಯಾವ ರೀತಿಯಿಂದ ಸಮ ಅವೆ ನೀನು ಹೇಳಬೇಕು. ಯಾವ ರೀತಿಯಿಂದ — ಮತ್ತು — ಸಮ ಅವೆ ? ''

ಹುಡುಗರ ಉತ್ತರಗಳು—

ಸಮ

(ಅ) ಮಾವಿನಹಣ್ಣು ಸವಿ ಇರುತ್ತದೆ ಬಾಳೇಹಣ್ಣೂ ಸವಿ ಇರುತ್ತದೆ; ಅದೂ ಹಣ್ಣು ಇದೂ ಹಣ್ಣು ; ತಿನ್ನುತ್ತಾರೆ ; ಹಣ್ಣು ಎಂದು ಬರುತ್ತವೆ ; ಎರಡೂ ಹಣ್ಣು ಆಗುತ್ತವೆ ; ಮುಂದೆ ಅದಕ್ಕೂ ಕೊಕ್ಕಿ ಹಾಗೆ ಇರು ತ್ತದೆ ಇದಕ್ಕೂ ಕೊಕ್ಕಿ ಹಾಗೆ ಇರುತ್ತದೆ ; ಮಾವಿನಹಣ್ಣು ಗಿಡದೊಳಗೆ ಹುಟ್ಟುತ್ತದೆ ಬಾಳೇಹಣ್ಣೂ ಗಿಡದೊಳಗೆ ಹುಟ್ಟುತ್ತದೆ.

(ಬ) ಕಬ್ಬಿಣ ಗುಡ್ಡದೊಳಗೆ ಸಿಗುತ್ತದೆ ಬೆಳ್ಳಿಯೂ ಗುಡ್ಡದೊಳಗೆ ಸಿಗುತ್ತದೆ; ಎರಡೂ ಭಾರ ಇರುತ್ತವೆ; ಕಬ್ಬಿಣವೂ ಘಟ್ಟಿ ಇರುತ್ತದೆ ಬೆಳ್ಳಿಯೂ ಘಟ್ಟಿ ಇರುತ್ತದೆ; ಖಣಿಯೊಳಗೆ ಹುಟ್ಟುತ್ತವೆ; ಕಾಸಿದಾಗ ಅದೂ ಕೆಂಪು ಇರುತ್ತದೆ ಇದೂ ಕೆಂಪು ಇರುತ್ತದೆ; ಕಾಸಿ ಬಡಿದರೆ ಇದೂ ಮಣಿಯುತ್ತದೆ ಅದೂ ಮಣಿಯುತ್ತದೆ.

(ಕ) ಆದರ ಮೇಲೆ ಕೂತುಕೊಂಡು ಹೋಗುತ್ತಾರೆ ಇದರ ಮೇಲೂ ಕೂತುಕೊಂಡು ಹೋಗುತ್ತಾರೆ; ಎರಡೂ ಕಟ್ಟಿಗೆಯಿಂದ ಮಾಡುತ್ತಾರೆ; ಟಾಂಗಾ ಓಡುತ್ತದೆ ಉಗೆಹಡಗವೂ ಓಡುತ್ತದೆ; ಅದನ್ನೂ ಮನುಷ್ಯನು ನಡಿಸುತ್ತಾನೆ ಇದನ್ನೂ ಮನುಷ್ಯನು ನಡಿಸುತ್ತಾನೆ; ಎರಡೂ ಹಾಗೇ ಹೋಗುತ್ತಿರುತ್ತವೆ; ಇದು ಎಷ್ಟು ಓಡುತ್ತದೆ ಅದೂ ಅಷ್ಟೇ ಓಡುತ್ತದೆ; ಟಾಂಗೆಗೂ ಕೂಡ್ರುವದು ಇರುತ್ತದೆ ಉಗೆಹಡಗಕ್ಕೂ ಕೂಡ್ರುವದು ಇರುತ್ತದೆ.

(ಡ) ಕಟ್ಟಿಗೆಯಿಂದ ಬೆಂಕಿ ಆಗುತ್ತದೆ ಇದ್ದಲಿಯಿಂದಲೂ ಬೆಂಕಿ ಆಗುತ್ತದೆ; ಕಟ್ಟಿಗೆ ಉರಿಯುತ್ತದೆ ಇದ್ದಲಿಯೂ ಉರಿಯುತ್ತದೆ; ರೇಲ್ವೆಗೆ ಉಪಯೋಗ ಬೀಳುತ್ತವೆ.

ತಪ್ಪು

(ಅ) ಮಾವಿನಹಣ್ಣು ದುಂಡ ಇರುತ್ತದೆ, ಬಾಳೇಹಣ್ಣು ಉದ್ದ ಇರುತ್ತದೆ; ಎರಡೂ ಉದ್ದ ಇರುತ್ತವೆ.

(ಬ) ಕಬ್ಬಿಣ ಕರ್‍ರಗೆ ಬೆಳ್ಳಿ ಬಿಳೇದು; ಕಬ್ಬಿಣ ಘಟ್ಟಿ ಉದ್ದ ಇರುತ್ತದೆ ಬೆಳ್ಳಿ ಗಿಡ್ಡ ಇರುತ್ತದೆ ಮುಳ್ಳುಮುಳ್ಳು ಇರುತ್ತದೆ; ಕಬ್ಬಿಣ ಬೆಳ್ಳಿಯ ಹಾಗೆ ಇರುತ್ತದೆ; ಒಂದೇ ನಮೂನೆ ಆಗುತ್ತದೆ; ಉಪಯೋಗಕ್ಕೆ ಬರುತ್ತವೆ; ಉದ್ದಕೆ.

(ಕ) ಬೋಟ ದೊಡ್ಡದು ಟಾಂಗಾ ಸಣ್ಣದು; ಟಾಂಗಾ ದೊಡ್ಡದು; ಟಾಂಗಾಕ್ಕೆ ಕುದುರೆ ಇರುತ್ತದೆ ದೋಣಿ ಚೌಕ ಇರುತ್ತದೆ; ಟಾಂಗಾ ನೆಲದ ಮೇಲೆ ಹೋಗುತ್ತದೆ ಹಡಗ ನೀರೊಳಗೆ ಹೋಗುತ್ತದೆ; ಅದು ಕಬ್ಬಿಣದು ಇದು ಕಟ್ಟಿಗೆಯದು; ಟಾಂಗಾ ಓಡುತ್ತಿರುತ್ತದೆ ಹಡಗ ನೀರೊಳಗೆ ನಡಿಯುತ್ತಿರುತ್ತದೆ.

(ಡ) ಕಟ್ಟಿಗೆ ಉದ್ದ ; ಕಟ್ಟಿಗೆ ಉದ್ದ ಹಗುರ ಇರುತ್ತದೆ ಇದ್ದಲಿ ಚೌಕ ಚೌಕ ಇರುತ್ತದೆ; ಕಟ್ಟಿಗೆ ಉರಿದರೆ ಇದ್ದಲಿ ಆಗುತ್ತದೆ; ಕಬ್ಬಿಣ ಚಲೋ ಬೆಳ್ಳಿಯೂ ಚಲೋ; ಕಟ್ಟಿಗೆ ಉದ್ದ ಇರುತ್ತದೆ ಇದ್ದಲಿ ಸ್ವಲ್ಪ ಉದ್ದ ಇರುತ್ತದೆ.

**ಪ್ರಶ್ನೆ** ೪.—ಮೂರು ಶಬ್ದಗಳಿಂದ ವಾಕ್ಯವನ್ನು ರಚಿಸುವದು (೩ರಲ್ಲಿ ೨. ಬಾಯಿಯಿಂದ ಕೊಡುವದು. ಪ್ರತಿಯೊಂದಕ್ಕೆ ೧ ಮಿನೀಟು. ಹುಡುಗನಿಗೆ ಹೇಳುವ ಮಾತುಗಳನ್ನು ಅವಶ್ಯವೆನಿಸಿದರೆ ಇನ್ನು ಒಂದೇ ಸಾರಿ ಓದಬಹುದು).

ವಾಕ್ಯಗಳಲ್ಲಿ ಉಪಯೋಗಿಸುವ ಮೂರು ಮೂರು ಶಬ್ದಗಳು—

(೧) ಹುಡುಗ, ಚಂಡು, ನದಿ.

(೨) ಕೆಲಸಮಾಡು, ಹಣ, ಜನರು.

(೩) ಗಿಡಗಳು, ನದಿಗಳು, ಕೆರೆಗಳು.

"ವಾಕ್ಯ ಅಂದರೆ ನಿನಗೆ ಗೊತ್ತದೆ. ಕೆಲವೊಂದು ಶಬ್ದಗಳನ್ನು ಏನಾದರೂ ಹೇಳುವ ಹಾಗೆ ಕೂಡಿಸಿದರೆ ವಾಕ್ಯ ಅನ್ನುತ್ತಾರೆ. ಈಗ ನಾನು ನಿನಗೆ ಮೂರು ಶಬ್ದಗಳನ್ನು ಕೊಡುತ್ತೇನೆ. ಇವನ್ನು ಉಪಯೋಗಿಸಿ ನೀನು ಒಂದು ವಾಕ್ಯವನ್ನು ಮಾಡಬೇಕು. ಈ ಶಬ್ದಗಳು ಅಂದರೆ—ಹುಡುಗ, ಚಂಡು, ನದಿ. ಈಗ ಈ ಮೂರೂ ಶಬ್ದಗಳನ್ನು ಉಪಯೋಗಿಸಿ ಒಂದು ವಾಕ್ಯವನ್ನು ಮಾಡು."

ಇದರ ಉತ್ತರವನ್ನು ಸಹ ಹುಡುಗನು ಬಾಯಿಯಿಂದಲೇ ಕೊಡಬೇಕು.

ಇದೇ ಪ್ರಕಾರ ಉಳಿದ ಮೂರು ಮೂರು ಶಬ್ದಗಳನ್ನು ಉಪಯೋಗಿಸಬೇಕು. ಈ ಶಬ್ದಗಳನ್ನು ಕೊಡುವ ಮುಂದೆ ಸಂಕ್ಷೇಪವಾಗಿ ಕೆಳಗಿನಂತೆ ಅನ್ನಬೇಕು—

"ಈಗ — — — ಈ ಮೂರು ಶಬ್ದಗಳನ್ನು ಉಪಯೋಗಿಸಿ ಇನ್ನೊಂದು ವಾಕ್ಯವನ್ನು ಮಾಡು."

ಹೇಳಿದ್ದು ಹುಡುಗನಿಗೆ ಸಮವಾಗಿ ತಿಳಿಯದಿದ್ದರೆ ಇನ್ನೊಂದು ಸರತಿ ಅದೇ ಪ್ರಕಾರ ಹೇಳಬೇಕು. ಆದರೆ ಅದರೊಳಗಿನ ಯಾವ ಶಬ್ದಗಳನ್ನೂ ಬದಲು ಮಾಡಬಾರದು.

ವಾಕ್ಯದಲ್ಲಿ ಈ ಮೂರು ಶಬ್ದಗಳ ಹೊರತು ಯಾವ ಶಬ್ದಗಳೂ ಇರಬಾರದು ಎಂದು ಹುಡುಗನ ತಪ್ಪು ತಿಳುವಳಿಕೆ ಆದರೆ ಹೀಗೆ ಅನ್ನಬೇಕು—

"ಈ ಮೂರು ಶಬ್ದಗಳ ಕೂಡ ಮತ್ತೆ ಕೆಲವು ಶಬ್ದಗಳನ್ನು ಹಾಕಿ ಒಂದು ವಾಕ್ಯವನ್ನು ಮಾಡಬೇಕು."

ಮೂರು ಶಬ್ದಗಳನ್ನು ಮೂರು ವಾಕ್ಯಗಳಲ್ಲಿ ಉಪಯೋಗಿಸಬೇಕೆಂದು ಅವನ ತಿಳುವಳಿಕೆ ಆಗಿದ್ದರೆ, ಮುಂದೆ ಹೀಗೆ ಅನ್ನಬೇಕು—

"ಹಾಗಲ್ಲ. ಮೂರೂ ಶಬ್ದಗಳನ್ನು ಉಪಯೋಗಿಸಿ ಒಂದೇ ವಾಕ್ಯವನ್ನು ಮಾಡಬೇಕು."

ಉತ್ತರವು ಸರಿಯೆಂದು ತಿಳಿಯಬೇಕಾದರೆ—(೧) ಮೂರೂ ಶಬ್ದಗಳಿಂದ ಒಂದೇ ಸಾದಾ ವಾಕ್ಯವಾಗಿರಬೇಕು ; ಮತ್ತು (೨) ಆ ವಾಕ್ಯದ ಅರ್ಥವು ಸರಿಯಾಗಿರಬೇಕು, ಅಂದರೆ ಅದರಲ್ಲಿ ಬುದ್ಧಿಗೇಡಿತನವು ಏನೂ ಇರಬಾರದು.

ಹುಡುಗನ ಉತ್ತರಗಳು—

ಸಮ

(ಅ) ಹುಡುಗನು ಚಂಡನ್ನು ನದಿಯಲ್ಲಿ ಹಾಕಿದನು ; ಹುಡುಗನು ಚಂಡನ್ನು ನದಿಯಲ್ಲಿ ಒಗೆದನು ; ನದಿಯ ಮೇಲೆ ಹುಡುಗ ಚಂಡು ಆಡುತ್ತಾನೆ ; ಹುಡುಗ ನದಿಯಲ್ಲಿ ಚಂಡು ಆಡುತ್ತಾನೆ ; ಹುಡುಗನು ನದಿಯ ದಂಡೆಯ ಮೇಲೆ ಚಂಡಿನಿಂದ ಆಡುತ್ತಾನೆ ; ಹುಡುಗರು ಚಂಡನ್ನು ತಕ್ಕೊಂಡು ನದಿಯ ಕಡೆಗೆ ಹೋದರು ; ಹುಡುಗ ಚಂಡು ಆಡುವಾಗ ನದಿಯೊಳಗೆ ಚಂಡು ಹೋಗುತ್ತದೆ.

(ಬ) ಜನರು ಕೆಲಸಮಾಡುವದರಿಂದ ಹಣವನ್ನು ದೊರಕಿಸುತ್ತಾರೆ ; ಜನರು ಕೆಲಸಮಾಡಿ ಹಣ ಗಳಿಸುತ್ತಾರೆ ; ಜನರು ಕೆಲಸಮಾಡಿ ಹಣ ತಂದರು ; ಕೆಲಸಮಾಡಿ ಜನರು ಹಣವನ್ನು ಇಸಕೊಳ್ಳುವರು ; ಜನರು ಕೆಲಸಮಾಡಿದರೆ ಹಣವನ್ನು ಕೊಡುತ್ತೇನೆ.

(ಕ) ಗಿಡಗಳ ಹತ್ತರ ನದಿಗಳು ಮತ್ತು ಕೆರೆಗಳು ಇದ್ದವು ; ಗಿಡಗಳೂ ನದಿಗಳೂ ಕೆರೆಗಳೂ ಉಪಯೋಗಕ್ಕೆ ಬರುತ್ತವೆ ; ಗಿಡಗಳು ನದಿ ಕೆರೆಯ ಮೇಲೆ ಇರುತ್ತವೆ ; ಗಿಡಗಳು ನದಿಯ ಮತ್ತು ಕೆರೆಗಳ ಹತ್ತರ ಚಲೋ

ಬೆಳೆಯುತ್ತವೆ; ಕೆರೆಗಳಿಂದ ಅಥವಾ ನದಿಗಳಿಂದ ಗಿಡಗಳು ಹುಟ್ಟುತ್ತವೆ; ಇಲ್ಲಿ ಗಿಡಗಳೂ ನದಿಗಳೂ ಸರೋವರಗಳೂ ಅವೆ; ನದಿಗಳಿಂದ ಅಥವಾ ಕೆರೆಗಳಿಂದ ಜನರು ಗಿಡಗಳಿಗೆ ನೀರು ಹಾಕುತ್ತಾರೆ.

ತಪ್ಪು

(ಅ) ಹುಡುಗ ಚಂಡು ಆಡುತ್ತಾನೆ ನದಿ ಹರಿಯುತ್ತದೆ; ಹುಡುಗನು ಚಂಡನ್ನು ; ಹುಡುಗ ಚಂಡು ನದಿ.

(ಬ) ಕೆಲಸಮಾಡಿ ಹಣವನ್ನು ತಾ ಜನರನ್ನು ಸಂತೋಷಗೊಳಿಸು; ಕೆಲಸಮಾಡಿದರೆ ಹಣ ಬರುತ್ತದೆ; ಕೆಲಸವನ್ನೂ ಹಣವನ್ನೂ ಜನರು ಪ್ರಯೋಜನ ಮಾಡಬೇಕು; ಕೆಲಸ ಹಣ ಜನರು; ಕೆಲಸಮಾಡು ಹಣ ಕೊಡುತ್ತದೆ; ಕೆಲಸಮಾಡಿ ಹಣವನ್ನು ಜನರಲ್ಲಿ; ಕೆಲಸದ ಹಣ ಜನರು; ಕೆಲಸದಲ್ಲಿ ಜನರು ಹಣವನ್ನು ಗಳಿಸಿದರು; ಕೆಲಸಮಾಡು ಹಣ ಜನರಿಗೆ ಕೊಡು; ಕೆಲಸವನ್ನು ಮಾಡು ದುಡ್ಡು ಜನರು.

(ಕ) ಗಿಡಗಳು ಕೆರೆಗಳನ್ನು ನದಿಗಳನ್ನು ತಕ್ಕೊಳ್ಳುತ್ತವೆ; ಕೆರೆದಂಡೆಯಲ್ಲಿ ಗಿಡ ಹುಟ್ಟಿ ಕೆರೆಗೆ ನದಿ ಕೂಡಿತು; ಗಿಡಗಳು ಬೆಳೆಯುತ್ತವೆ ಸರೋವರಗಳು ದೊಡ್ಡದಿರುತ್ತವೆ; ಗಿಡಗಳೂ ನದಿಗಳೂ ಕೆರೆಗಳೂ; ಗಿಡವು ನದಿಯ ಬಳಿಯಲ್ಲಿ ಇರುತ್ತದೆ; ನದಿಯ ಮೇಲೆ ಗಿಡ ಕೆರೆಯ ಮೇಲೆ ಗಿಡ; ಗಿಡ ಕೆರೆಯೊಳಗೆ ಬಿತ್ತು ನದಿ ಕೂಡಿತು ಕೆರೆಯೊಳಗೆ; ನದಿಗಳ ಗಿಡ ಕೆರೆ ಇತ್ತು; ಗಿಡದ ಹತ್ತರ ನದಿಗಳು ಮತ್ತು ಕೆರೆಗಳು; ನದಿಗಳ ದಂಡೆಯ ಮೇಲೆ ಗಿಡಗಳು ಕೆರೆಗಳು; ಗಿಡ ನದಿಯೊಳಗೆ ಬಿತ್ತು; ನದಿಯ ನೀರು ಹರಕೋತ ಹೋಗಿ ಕೆರೆಯೊಳಗೆ ಕೂಡಿತು; ಗಿಡಗಳು ನದಿಗಳಲ್ಲಿ; ಗಿಡಗಳು ಕೆರೆಗಳಲ್ಲಿ ನದಿ ಇರುವುದು.

**ಪ್ರಶ್ನೆ ೫.**—ಓದುವದು ಮತ್ತು ಬಳಿಕ ರಿಪೋರ್ಟ ಕೊಡುವದು (೬ ಸಂಗತಿಗಳು. ೫ ತಪ್ಪು. ೧ ಮಿನೀಟು).

(ವರ್ಷ ೮, ಪ್ರಶ್ನೆ ೬ ನೋಡಿರಿ.)

**ಪ್ರಶ್ನೆ ೬.**—ಶಬ್ದಗಳನ್ನು ಸ್ಪಷ್ಟಂದ ರೀತಿಯಿಂದ ಹೇಳುವದು (ಅನಿಯಂತ್ರಿತ ಸಂಯೋಜನೆಯು) ೩ ಮಿನೀಟಿನಲ್ಲಿ ೩೫ ಶಬ್ದಗಳು (ಪ್ರತಿ ೧/೩ ಮಿನೀಟಿನಲ್ಲಿ ಕೊಟ್ಟ ಶಬ್ದಗಳನ್ನು ಬೇರೆ ಬೇರೆ ಬರೆದಿಡಬೇಕು).

"ಈಗ ಮೂರು ಮಿನೀಟಿನೊಳಗೆ ಎಷ್ಟು ಬೇರೆ ಬೇರೆ ಶಬ್ದಗಳನ್ನು ನಿನಗೆ ಹೇಳಲಿಕ್ಕೆ ಆಗುತ್ತದೆ ಅದನ್ನು ನಾನು ನೋಡಬೇಕಾಗಿದೆ. ನಾನು ನಿನಗೆ 'ಆರಂಭಿಸು' ಎಂದ ಕೂಡಲೆ ಆರಂಭಿಸಿ ನೀನು ಆದಷ್ಟು ಬೇಗ ಬೇಗ ಶಬ್ದಗಳನ್ನು ಹೇಳಬೇಕು; ಮುಂದೆ ನಾನು ಅವನ್ನು ಎಣಿಸುವೆನು. ತಿಳಿಯಿತೇನು? ನೀನು ಆದಷ್ಟು ಪ್ರಯತ್ನವನ್ನು ಮಾಡಿ ಹೇಳು. ಬೇಕಾದ ಶಬ್ದಗಳನ್ನು ಹೇಳಬಹುದು. ಉದಾಹರಣಾರ್ಥವಾಗಿ—'ಮೋಡಗಳು', 'ನಾಯಿ', 'ಖುರ್ಚಿ', 'ಸುಖಿ', 'ಬಾ', 'ಹೋಗು'. ಇಕೋ, ಆರಂಭಿಸು."

ಮೊದಲನೇ ಸಾರಿ ತಿಳಿಯದಿದ್ದರೆ ಇದನ್ನೇ ಮತ್ತೊಂದು ಸಾರಿ ಹೇಳಬಹುದು. ಆದರೆ ಬಹುಶಃ ಇದರ ಆವಶ್ಯಕತೆಯು ಬೀಳುವದಿಲ್ಲ.

ಈ ಪರೀಕ್ಷೆಯು ನಡೆದಾಗ ಹುಡುಗನ ಕಡೆಗೆ ದಿಟ್ಟಿಸಿ ನೋಡಬಾರದು. ಯಾಕಂದರೆ, ಅವನ ಮನಸ್ಸು ಅದರೊಳಗೆ ತೊಡಗಲಿಕ್ಕಿಲ್ಲ. ದೃಷ್ಟಿಯನ್ನು ಬೇರೆ ಕಡೆ ಇಡಬೇಕು ಅಥವಾ ಉತ್ತರ ಬರಕೊಳ್ಳುವ ಕಾಗದದ ಕಡೆಗೆ ನೋಡಬೇಕು. ಶಕ್ಯವಿದ್ದರೆ ಶಬ್ದಗಳನ್ನು ಹುಡುಗನು ಕೊಟ್ಟ ಹಾಗೆ ಬರಕೊಳ್ಳಬೇಕು. ಆದರೆ ಸಹಾಯಮಾಡಲಿಕ್ಕೆ ಬೇರೊಬ್ಬನು ಇಲ್ಲದಿದ್ದರೆ ಇದು ಶಕ್ಯವಾಗುವದು ಕಠಿಣ. ಕನಿಷ್ಠ ಪಕ್ಷಕ್ಕೆ ಕೊಟ್ಟ ಶಬ್ದಗಳು ದೃಶ್ಯವಸ್ತುಗಳವೋ ಅಥವಾ ಭಾವವಾಚಕ ಶಬ್ದಗಳೋ ವಿಶೇಷಣಗಳೋ ಕ್ರಿಯಾಪದಗಳೋ—ಹೀಗೆ ಕೆಲವು ವರ್ಗಗಳಲ್ಲಿ ಹಾಕಿದರೆ ಕೆಲವು ಮನೋರಂಜಕ ಸಂಗತಿಗಳು ತಿಳಿಯುತ್ತವೆ. ಹೇಳಿದ ಶಬ್ದಗಳನ್ನೇ ಮತ್ತೆ ಹೇಳಿದರೆ ಲೆಕ್ಕದಲ್ಲಿ ಹಿಡಿಯಬಾರದು.

ಹುಡುಗನು ನಿಂತುಬಿಟ್ಟರೆ ೧೫ ಸೆಕಂಡುಗಳ ವರೆಗೆ ಹಾದೀ ನೋಡಿ, ಮುಂದೆ ಕೆಳಗಿನಂತೆ ಅನ್ನಬೇಕು—

"ಆದಷ್ಟು ಬೇಗ ಬೇಗ ಹೇಳು; ಬೇಕಾದ ಶಬ್ದಗಳನ್ನು ಹೇಳಬಹುದು."

ಪ್ರತಿ ಸಾರಿ ಹುಡುಗನು ನಿಂತಾಗ ೧೫ ಸೆಕಂಡು ಹಾದೀ ನೋಡಿ ಇದೇ ಪ್ರಕಾರ ಅನ್ನಬೇಕು.

ಕೆಲವು ಹುಡುಗರು ವಾಕ್ಯಗಳನ್ನು ಕೊಡುತ್ತಾರೆ ಅಥವಾ ಅಂಕೆಗಳನ್ನು ಎಣಿಸಲಿಕ್ಕೆ ಹತ್ತುತ್ತಾರೆ. ಆವಾಗ್ಗೆ ಹೀಗೆ ಅನ್ನಬೇಕು—

"ಅಂಕೆಗಳನ್ನು ಎಣಿಸುವದು (ವಾಕ್ಯಗಳನ್ನು ಅನ್ನುವದು) ಬೇಕಾಗಿಲ್ಲ. ಬೇರೆ ಬೇರೆ ಶಬ್ದಗಳನ್ನು ಹೇಳಬೇಕು. ನಡೆ, ಮುಂದೆ ಸಾಗಲಿ."

**ವೈಕಲ್ಪಿಕ ಪ್ರಶ್ನೆ.**—ಶಬ್ದಸಂಗ್ರಹ: ೨೦ ಶಬ್ದಗಳು (ಇದು ಕನ್ನಡ ಭಾಷೆಯೊಳಗಿನ ಒಟ್ಟು ೨೮,೦೦೦ ಶಬ್ದಗಳಲ್ಲಿ ೫,೬೦೦ ಶಬ್ದಗಳಿಗೆ ಸಮ).

ಕಾರ್ಡಿನ ಮೇಲೆ ಅಚ್ಚು ಹಾಕಿದ ಶಬ್ದಗಳ ಲಿಸ್ಟನ್ನು ಹುಡುಗನ ಎದುರಿಗೆ ಇಟ್ಟು ಕೆಳಗಿನಂತೆ ಅನ್ನಬೇಕು—

"ನಿನಗೆ ಎಷ್ಟು ಶಬ್ದಗಳು ಗೊತ್ತವೆ ಎಂಬದನ್ನು ನನಗೆ ನೋಡಬೇಕಾಗಿದೆ. ಕೇಳು, ನಾನು ನಿನಗೆ ಒಂದು ಶಬ್ದ ಹೇಳಿದ ಕೂಡಲೆ ನೀನು ನನಗೆ ಅದರ ಅರ್ಥವನ್ನು ಹೇಳಬೇಕು."

"ಕುಸ್ತಿ ಅಂದರೇನು?"

"ಬೀಜ ಅಂದರೇನು?"

"ಬೆಳಕಿಂಡಿ ಅಂದರೇನು?"

ಹುಡುಗನು ಸಮವಾಗಿ ವ್ಯಾಖ್ಯೆಯನ್ನು ಹೇಳಲಿಕ್ಕೆ ಧೈರ್ಯಗೊಳ್ಳದೆ ಅನುಮಾನಮಾಡಲಿಕ್ಕೆ ಹತ್ತಿದರೆ, ಕೆಳಗಿನಂತೆ ಹುಡುಗನಿಗೆ ಸ್ವಲ್ಪ ಧೈರ್ಯವನ್ನು ಕೊಟ್ಟು ಅನ್ನಬೇಕು—

"ನಿನಗೆ ಬೀಜ ಅಂದರೇನು ಗೊತ್ತದೆ? ನೀನು ಬೀಜವನ್ನು ನೋಡಿದ್ದೀ? ಹಾಗಾದರೆ, ಬೀಜ ಅಂದರೇನು ಹೇಳು, ನೋಡೋಣ."

ಹುಡುಗನು ಇನ್ನೂ ಸುಮ್ಮನೆ ಕೂತರೆ, ಮುಂದೆ ಹೀಗೆ ಅನ್ನಬೇಕು—

"ನಿನಗೆ ಬಂದ ಹಾಗೆ ಹೇಳು. ಬೇಕಾದ ಹಾಗೆ ಹೇಳಲಿಕ್ಕೆ ಅಡ್ಡಿ ಇಲ್ಲ. ಬೀಜ ಅಂದರೇನು ನಿನಗೆ ಗೊತ್ತದೆಯೋ ಇಲ್ಲವೋ ಎಂಬುದನ್ನಷ್ಟೇ ನಾನು ನೋಡಬೇಕಾಗಿದೆ."

ಹುಡುಗನ ಉತ್ತರವು ಸಮಾಧಾನಕಾರಕವಿಲ್ಲದಿದ್ದರೆ ಅಥವಾ ಅಪೂರ್ಣವಿದ್ದರೆ, ಕೆಳಗಿನಂತೆ ಅನ್ನಬೇಕು—

"ನೀನು ಹೇಳಿದ್ದು ನನಗೆ ನೆಟ್ಟಗೆ ತಿಳಿಯಲಿಲ್ಲ. ಸರಿಯಾಗಿ ಅರ್ಥಮಾಡಿ ಹೇಳು."

ಹುಡುಗನಿಗೆ ಉದ್ದೇಶಿಸುವಾಗ ಹೀಗೆಯೇ ಅನ್ನಬೇಕು. ಶಬ್ದದ ಉಪ

ಯೋಗವನ್ನು ವಾಕ್ಯವನ್ನು ಮಾಡಿ ಅಥವಾ ಬೇರೆ ಯಾವ ರೀತಿಯಿಂದಲೂ ತೋರಿಸಬಾರದು. ಸಣ್ಣ ಹುಡುಗರ ಕಡೆಯಿಂದ ಶಾಸ್ತ್ರೋಕ್ತ ವ್ಯಾಖ್ಯೆಗಳು ಬೇಕಾಗಿಲ್ಲ. ಹಲವು ಸಾರಿ ಶಬ್ದದ ಅರ್ಥವನ್ನು ಹೇಳುವಾಗ ಹುಡುಗನ ಶಬ್ದಗಳು ವ್ಯಾಕರಣ ದೃಷ್ಟಿಯಿಂದ (ನಾಮ, ಸರ್ವನಾಮ ಮುಂತಾದವುಗಳಲ್ಲಿ) ಒಂದು ವರ್ಗದವು ಇನ್ನೊಂದು ವರ್ಗದವಾದರೂ ಅಡ್ಡಿ ಇಲ್ಲ.

## ವರ್ಷ ೧೦

**ಪ್ರಶ್ನೆ ೧.**—ಐದು ತೂಕಗಳ ಕ್ರಮವನ್ನು ಹಚ್ಚುವದು (ಮೂರು ಪ್ರಯತ್ನಗಳಲ್ಲಿ ಎರಡು ಸಮ ಇರಬೇಕು).

ಐದು ರಟ್ಟಿನ ಔಷಧದ ಗುಳಿಗೆಗಳ ೧½ ಇಂಚು ಅಥವಾ ಸ್ವಲ್ಪ ಕಡಿಮೆ ವ್ಯಾಸವುಳ್ಳ ಮತ್ತು ಒಂದೇ ಪ್ರಕಾರ ಕಾಣಿಸುವ ಪೆಟ್ಟಿಗೆಗಳನ್ನು ತಕ್ಕೊಂಡು, ಅವುಗಳಲ್ಲಿ ಸೀಸಿನ ತಗಡು ಅಥವಾ ಗುಂಡುಗಳನ್ನು ಹಾಕಿ ೩, ೬, ೯, ೧೨ ಮತ್ತು ೧೫ ಗ್ರ್ಯಾಮ ತೂಕ ಆಗುವ ಹಾಗೆ ಮಾಡಬೇಕು. ಆ ಗುಂಡುಗಳನ್ನು ಇಲ್ಲವೆ ತಗಡುಗಳನ್ನು ಅರಳೆಯಿಂದ ಸುತ್ತಿ ನಡುಮಧ್ಯದಲ್ಲಿ ಹಾಕಬೇಕು. ಈ ತಗಡು ಅಥವಾ ಗುಂಡುಗಳು ಅಗಳಾಡಿಸಿದರೆ ಸಪ್ಪಳ ಮಾಡಬಾರದು. ಈ ಪೆಟ್ಟಿಗೆಗಳ ಬುಡದಲ್ಲಿ PSYCH ಅಥವಾ ಇಂಥ ಬೇರೆ ಅಕ್ಷರಗಳನ್ನು ಹಾಕಿ, ಹುಡುಗನು ಅವುಗಳ ಕ್ರಮವನ್ನು ಹಚ್ಚಿದ ಮೇಲೆ ಪರೀಕ್ಷಕನು ಅವನ್ನು ತಿರುಗಿಸಿದಾಗ ಒಮ್ಮೆಲೆ ಅವುಗಳ ಗುರುತು ಸಿಗುವ ಹಾಗೆ ಮಾಡಬೇಕು. ಈ ಪೆಟ್ಟಿಗೆಗಳನ್ನು ಸಿಕ್ಕಹಾಗೆ ಹುಡುಗನ ಎದುರಿಗೆ ಟೇಬಲಿನ ಮೇಲೆ ಇಟ್ಟು ಕೆಳಗಿನಂತೆ ಅನ್ನಬೇಕು—

"ಈ ಪೆಟ್ಟಿಗೆಗಳನ್ನು ನೋಡು. ಇವೆಲ್ಲ ಒಂದೇ ತರದವು ಕಾಣುತ್ತವೆ, ಅಲ್ಲವೋ? ಆದರೆ ಅವು ಸ್ವಲ್ಪ ಹೆಚ್ಚು ಕಡಿಮೆ ಅವೆ. ಕೆಲವು ಜಡ ಅವೆ. ಕೆಲವು ಹಗುರಾಗಿವೆ. ಯಾವ ಎರಡು ಪೆಟ್ಟಿಗೆಗಳ ತೂಕವೂ ಸರಿ ಇಲ್ಲ. ಈಗ ಎಲ್ಲಕ್ಕೂ ಜಡವಾದ ಪೆಟ್ಟಿಗೆಯನ್ನು ಹುಡುಕಿ ತೆಗೆ ಮತ್ತು ಇಲ್ಲಿ ಇಡು, ಅದಕ್ಕಿಂತ ಕಡಿಮೆ ಜಡವಿದ್ದಂಥ ಪೆಟ್ಟಿಗೆಯನ್ನು ಇಲ್ಲಿ ಇಡು, ಅದಕ್ಕೂ ಕಡಿಮೆಯದು ಇಲ್ಲಿ, ಅದಕ್ಕಿಂತ ಹಗುರಾದದ್ದು ಇಲ್ಲಿ ಮತ್ತು ಎಲ್ಲಕ್ಕೂ ಹಗುರಾದದ್ದು ಈಚೆಯ ತುದಿಗೆ ಇಡು (ಪ್ರತಿ ಸಾರಿ ಯೋಗ್ಯ ಸ್ಥಳದ ಮೇಲೆ ಬೆರಳಿಟ್ಟು), ತಿಳಿಯಿತೇನು? ನೆನಪಿನಲ್ಲಿ ಇಟ್ಟುಕೊ. ಯಾವ ಎರಡು ಪೆಟ್ಟಿಗೆಗಳೂ ಒಂದೇ ತೂಕದವು ಇಲ್ಲ. ಎಲ್ಲಕ್ಕೂ ಜಡವಾದದ್ದನ್ನು ಇಲ್ಲಿ ಇಡು. ಅದಕ್ಕಿಂತ ಕಡಿಮೆಯಾದದ್ದು ಇಲ್ಲಿ, ಅದ

ಕ್ಕಿಂತ ಹಗುರಾದದ್ದು ಇಲ್ಲಿ, ಅದರ ಕೆಳಗಿನದು ಇಲ್ಲಿ, ಮತ್ತು ಎಲ್ಲಕ್ಕೂ ಹಗುರಾದದ್ದು ಈ ತುದಿಗೆ ಇಡು. ಈಗ ಆರಂಭಿಸು."

ಮೇಲೆ ಒಮ್ಮೆ ಹುಡುಗನಿಗೆ ಏನು ಮಾಡಬೇಕೆಂದು ಹೇಳಿ, ಮತ್ತೊಮ್ಮೆ ಸಂಕ್ಷೇಪವಾಗಿ ಅದರದೇ ಪುನರುಚ್ಚಾರ ಮಾಡಿದೆ. ಇದು ಅವಶ್ಯವದೆ.

ಹುಡುಗನು ಇನ್ನೂ ತಿಳಕೊಳ್ಳದೆ ಇದ್ದರೆ ಇನ್ನೊಮ್ಮೆ ಹೀಗೇ ಎಲ್ಲ ತಿರುಗಿ ಅನ್ನಬೇಕು. ಇದರ ಹೊರತು ಬೇರೆ ಯಾವ ತರದ ಸಹಾಯವನ್ನೂ ಕೊಡಬಾರದು. ಪೆಟ್ಟಿಗೆಗಳನ್ನು ಯಾವ ತರದಿಂದ ಕೈಯೊಳಗೆ ತಕ್ಕೊಂಡು ತೂಗಿ ನೋಡಬೇಕು ಎಂಬದನ್ನು ಹುಡುಗನಿಗೆ ತಿಳಿಸಿ ಕೊಡಬಾರದು. ಸಮವಾಗಿ ಹೇಗೆ ಇದನ್ನು ಮಾಡಬೇಕು ಇದು ಈ ಪರೀಕ್ಷೆಯ ಒಂದು ಅಂಗವಾಗಿರುತ್ತದೆ.

ಕೆಲವು ಹುಡುಗರು ಆದಷ್ಟು ಲಗು ಮಾಡಬೇಕೆಂಬ ತಪ್ಪು ತಿಳುವಳಿಕೆಯಿಂದ ಲಗಬಗೆಯಿಂದ ಇಟ್ಟು ಮುಗಿಸುತ್ತಾರೆ. ಕೆಲವರು ಹೆಚ್ಚು ವೇಳೆ ತಕ್ಕೊಂಡು ತಮ್ಮ ಇಟ್ಟ ಕ್ರಮವನ್ನು ಎರಡನೇ ಸಾರಿ ನೋಡುತ್ತಾರೆ. ಎಲ್ಲರಿಗೂ ಆದಷ್ಟು ಅಷ್ಟೇ ಸವಲತನ್ನು ಕೊಡಬೇಕಾದ್ದರಿಂದ ಹುಡುಗನು ರಚನೆ ಮುಗಿಸಿದ ಮೇಲೆ ಕೆಳಗಿನಂತೆ ಅನ್ನಬೇಕು—

"ಎಲ್ಲ ಪೆಟ್ಟಿಗೆಗಳನ್ನೂ ಸರಿಯಾಗಿ ಇಟ್ಟಿದ್ದೀಯೋ ಇಲ್ಲವೋ ಇನ್ನೊಮ್ಮೆ ನೋಡು."

**ಪ್ರಶ್ನೆ ೨.**—೨೦ರಿಂದ ೨೨ ಅಕ್ಷರಗಳನ್ನು ತಿರುಗಿ ಅನ್ನುವದು (೩ರಲ್ಲಿ ೧ ಅಥವಾ ಒಂದೊಂದು ತಪ್ಪು ಇದ್ದಲ್ಲಿ ೨).

(ಅ) "ಹುಣಿಸೇ ಗಿಡದ ತಂಪು ನೆರಳಿನಲ್ಲಿ ಹುಡುಗರು ಆಡುತ್ತಾರೆ."

(ಬ) "ಒಂದೂವರೆ ಆಯಿತು ; ಮನೆಯಲ್ಲಿ ಶಾಂತತೆಯಿದ್ದು ಬೆಕ್ಕು ಮಲಗಿದೆ."

(ಕ) "ಬೇಸಿಗೆಯಲ್ಲಿ ನಮಗೆ ಸಹಸವಾಗದಷ್ಟು ಸೆಕೆಯಾಗುತ್ತದೆ."

(ವರ್ಷ ೭, ಪ್ರಶ್ನೆ ೧ರಂತೆ.)

**ಪ್ರಶ್ನೆ ೩.**—ತಿಂಗಳುಗಳ ಹೆಸರುಗಳನ್ನು ಹೇಳುವದು (೨೦ ಸೆಕಂಡು. ೧ ತಪ್ಪು ಮಾಫ. ೩ರಲ್ಲಿ ೨ ಪರೀಕ್ಷಾಪ್ರಶ್ನೆಗಳು ಸಮ).

"ವರ್ಷದ ಎಲ್ಲ ತಿಂಗಳುಗಳ ಹೆಸರು ಹೇಳು."

"ಏಪ್ರಿಲದ ಮುಂಚೆ ಯಾವ ತಿಂಗಳು ಬರುತ್ತದೆ?"

"ಜುಲೈಯು ಮುಂಚೆ?"

"ನವಂಬರದ ಮುಂಚೆ?"

ಈ ಪ್ರಶ್ನೆಗಳನ್ನು ಸರಳವಾಗಿ ಕೇಳಬೇಕು. ಬೇರೆ ಯಾವ ತರದ ಸಹಾಯವನ್ನು ಮಾಡಬಾರದು. ಮತ್ತು ಒಂದು ತಿಂಗಳ ಹೆಸರು ಹೇಳಿ, ಈ ತಿಂಗಳಿಂದ ಆರಂಭಮಾಡು ಎಂದೂ ಹೇಳಬಾರದು. ಹುಡುಗನು ಯಾವ ತಿಂಗಳಿಂದ ಆರಂಭಮಾಡಿದರೂ ಅಡ್ಡಿ ಇಲ್ಲ. ಆದರೆ ಅವನು ಕ್ರಮದಿಂದ ಹನ್ನೆರಡೂ ತಿಂಗಳ ಹೆಸರು ಹೇಳಬೇಕು.

ಹುಡುಗನು ಮೊದಲನೇ ತಿಂಗಳ ಹೆಸರು ಹೇಳಿದ ಕ್ಷಣದಿಂದ ವೇಳೆಯ ಲೆಕ್ಕವನ್ನು ಇಡಬೇಕು. ಒಮ್ಮೊಮ್ಮೆ ಚಲೋ ಹುಡುಗರಿಗೆ ಸಹ ಮೊದ ಲನೇ ತಿಂಗಳ ಹೆಸರು ಒಮ್ಮೆಲೆ ಲಕ್ಷ್ಯದಲ್ಲಿ ಬರುವದಿಲ್ಲ ಮತ್ತು ಇಷ್ಟು ಹೊತ್ತು ವ್ಯರ್ಥಹೋಗುತ್ತದೆ.

**ಪ್ರಶ್ನೆ ೪.**—ನೆನಪಿನಿಂದ ಡಿಜಾಯನ ತೆಗೆಯುವದು (೧ ಸಮ, ೧ ಅರ್ಧಸಮ. ೧೦ ಸೆಕಂಡು ತೋರಿಸುವದು).

ಕಾರ್ಡು ತೋರಿಸುವದಕ್ಕಿಂತ ಮುಂಚೆ ಹುಡುಗನಿಗೆ ಕೆಳಗಿನಂತೆ ಅನ್ನಬೇಕು—

"ಈ ಕಾರ್ಡಿನ ಮೇಲೆ ಎರಡು ಡ್ರಾಯಿಂಗುಗಳು ಅವೆ. ನಾನು ಅವನ್ನು ನಿನಗೆ ೧೦ ಸೆಕಂಡಿನ ವರೆಗೆ ತೋರಿಸುತ್ತೇನೆ. ಮುಂದೆ ನಾನು ಕಾರ್ಡನ್ನು ಆಚೆಗೆ ಒಯ್ಯುವೆನು. ಆನಂತರ ನೀನು ನೆನಪಿನಿಂದ ಈ ಎರಡೂ ಡ್ರಾಯಿಂಗುಗಳನ್ನು ತೆಗೆಯಬೇಕು. ಎರಡೂ ಡ್ರಾಯಿಂಗು ಗಳನ್ನು ಲಕ್ಷ್ಯಗೊಟ್ಟು ನೋಡು. ನಿನಗೆ ಬರೇ ೧೦ ಸೆಕಂಡು ತೋರಿಸು ವೆನು, ನೆನಪಿನಲ್ಲಿಡು."

ಹುಡುಗನಿಗೆ ಮೊದಲು ಕಾಗದ ಪೇನಿಸಿಲನ್ನು ಕೊಟ್ಟು ಆ ಮೇಲೆ ಕಾರ್ಡನ್ನು ೧೦ ಸೆಕಂಡಿನ ವರೆಗೆ ತೋರಿಸಬೇಕು. ಕಾರ್ಡನ್ನು ಹುಡು ಗನ ಎದುರಿಗೆ ಸರಿಯಾದ ಸ್ಥಿತಿಯಲ್ಲಿ ಇಡಬೇಕು. ಅಂದರೆ ಗ್ರೀಕ ಕೀಲಿ ಕೈಯ ನಮೂನೆಯನ್ನು ಎಡಕ್ಕೆ ಮತ್ತು ಅರ್ಧ ಪಿರೆಮಿಡಿನ ನಮೂನೆ ಯನ್ನು ಹುಡುಗನ ಬಲಕ್ಕೆ ಮಾಡಿ ಇಡಬೇಕು. ಹತ್ತು ಸೆಕಂಡಿನ

ಮೇಲೆ ಕಾರ್ಡನ್ನು ಒಮ್ಮೆಲೆ ಹುಡುಗನಿಗೆ ಮರೆಮಾಡಬೇಕು ಅಥವಾ ಪಾಕೀಟಿನಲ್ಲಿ ಹಾಕಬೇಕು. ಅಂದರೆ ಹುಡುಗನಿಗೆ ಅದರ ಕಡೆಗೆ ದೃಷ್ಟಿ ಹಾಕುವ ಮನಸ್ಸು ಸಹ ಆಗಬಾರದು. ಕಾರ್ಡನ್ನು ಬದಿಗೆ ಮಾಡಿದ ಕೂಡಲೆ ಹುಡುಗನು ಡ್ರಾಯಿಂಗ ತೆಗೆಯಲಿಕ್ಕೆ ಆರಂಭಮಾಡಬೇಕು. ಸ್ಕೋರಿಂಗ ಕಾರ್ಡಿನ ಮೇಲೆ ತೆಗೆದ ಡ್ರಾಯಿಂಗುಗಳ ನಮೂನೆಗಳು ಹುಡುಗನ ಡ್ರಾಯಿಂಗುಗಳಿಗೆ ಸಮ, ಅರ್ಧಸಮ ಅಥವಾ ತಪ್ಪು—ಹೀಗೆ ಗುಣಗಳನ್ನು ಕೊಡಲಿಕ್ಕೆ ಸಹಾಯಮಾಡಬಹುದು. ಗುಣಗಳನ್ನು ಕೊಡ ಲಿಕ್ಕೆ ಕೆಳಗಿನ ಸೂಚನೆಗಳ ಉಪಯೋಗವಾಗಬಹುದು—

## ಸಮ

ಎರಡೂ ಡ್ರಾಯಿಂಗುಗಳ ಮಹತ್ವದ ಭಾಗಗಳನ್ನು ಸರಿಯಾಗಿ ತೆಗೆ ದಿರಬೇಕು. ಉದಾಹರಣಾರ್ಥವಾಗಿ—ಕಾಟಕೋಣಗಳು, ಡ್ರಾಯಿಂಗು ಗಳ ಬೇರೆ ಬೇರೆ ವಿಶಿಷ್ಟ ಭಾಗಗಳು, ಮತ್ತು ನಡುವಿನ ಕಾಟಕೋಣ ಚತುಷ್ಕೋಣವನ್ನು ಮಧ್ಯಬಿಟ್ಟು ಸ್ವಲ್ಪ ಬದಿಗೆ ತೆಗೆಯುವದು—ಇವೆಲ್ಲ ಸರಿ ಯಾಗಿ ಇರಬೇಕು. ಡ್ರಾಯಿಂಗುಗಳು ಸೌಂದರ್ಯ ದೃಷ್ಟಿಯಿಂದ ತೀರ ಚಂದವಾಗಿ ತೆಗೆದಿರುವ ಕಾರಣವಿಲ್ಲ ಅಥವಾ ಸರಳರೇಖೆಗಳನ್ನು ಪೂರ್ಣ ಸರಳವಾಗಿ ತೆಗೆಯುವ ಕಾರಣವಿಲ್ಲ. ಅರ್ಧ ಪಿರೆಮಿಡ ಆಕೃತಿಯೊಳಗಿನ ಒಂದು ಚತುಷ್ಕೋಣವನ್ನು ಚೌರಸವಾಗಿ ತೆಗೆದರೂ ಅಡ್ಡಿ ಇಲ್ಲ ಅಥವಾ ಗ್ರೀಕ ಕೀಲಿ ನಮೂನೆಯ ಆಕೃತಿಯೊಳಗಿನ ಮೇಲಿನ ಸಣ್ಣ ಚೌಕನ್ನು ಹೊರಗಿನ ಬದಿಗೆ ಮೋರೆ ಮಾಡಿ ತೆಗೆದರೂ ಅಡ್ಡಿ ಇಲ್ಲ. ಅರ್ಧ ಪಿರೆಮಿಡ ಆಕೃತಿಯೊಳಗಿನ ನಡುವಿನ ಚೌಕನ್ನು ಬೇಕಾದ ಬಾಜುವಿಗೆ ಒಲಿಸಿ ತೆಗೆ ದರೂ ಅಡ್ಡಿ ಇಲ್ಲ. ಹಾಗೂ ಎಲ್ಲ ಆಕೃತಿಯನ್ನು ಉಳಿದ ರೀತಿಯಿಂದ ಸರಿ ಇದ್ದರೆ ಮೇಲಿನಿಂದ ಕೆಳಗೆ ತಿರುವುಮುರುವಾಗುವಂತೆ ತೆಗೆದರೂ ಅಡ್ಡಿ ಇಲ್ಲ.

## ಅರ್ಧಸಮ

ಡ್ರಾಯಿಂಗುಗಳು ಸರ್ವಸಾಧಾರಣ ಸಮ ಇರುವವು—ಆದರೆ ಯಾವ ದಾದರೊಂದು (ಒಂದೇ) ಮಹತ್ವದ ಭಾಗವನ್ನು ತಪ್ಪು ತೆಗೆದಿರುತ್ತಾರೆ ಅಥವಾ ತೆಗೆದಿರುವದೇ ಇಲ್ಲ; ಉದಾಹರಣಾರ್ಥವಾಗಿ—ನಡುವಿನ ಚತು ಷ್ಕೋಣದ ಒಲೆಯೋಣವನ್ನು ತೋರಿಸಿರುವದೇ ಇಲ್ಲ; ಅಥವಾ ಅರ್ಧ

ಪಿರೆಮಿಡ ಆಕೃತಿಯಲ್ಲಿ ಕಾಟಕೋಣ ಚೌಕೋಣಗಳ ಬದಲಾಗಿ ಎರಡೂ ಚಚ್ಚೌಕವಮಾಡಿ ತೆಗೆಯುವದು ಅಥವಾ ಉದ್ದ ಭುಜಗಳನ್ನು ಅಡ್ಡವಾಗಿ ತೆಗೆಯುವದರ ಬದಲಾಗಿ ಮೇಲೆ ಕೆಳಗೆ ಮಾಡಿ ತೆಗೆಯುವದು; ಕೋಣಗಳನ್ನು ಕಾಟಕೋಣಗಳ ಬದಲಾಗಿ ದುಂಡಗೆ ತೆಗೆಯುವದು; ಗ್ರೀಕ ಕೀಲಿ ಮಾದರಿಯಲ್ಲಿ ಸುತ್ತುಗಳನ್ನು ಹೆಚ್ಚು ಅಥವಾ ಕಡಿಮೆ ತೆಗೆಯುವದು.

ತಪ್ಪು

ಮೇಲಿನ ಮಹತ್ವದ ಭಾಗಗಳಲ್ಲಿ ಒಂದಕ್ಕಿಂತ ಹೆಚ್ಚು ಭಾಗಗಳನ್ನು ತಪ್ಪು ತೆಗೆಯುವದು.

**ಪ್ರಶ್ನೆ ೫.**—ಅನುಪ್ರಾಸಿಕ ಶಬ್ದಗಳನ್ನು ಹುಡುಕಿ ತೆಗೆಯುವದು (ಪ್ರತಿಯೊಂದು ಶಬ್ದಕ್ಕೆ ಮೂರು ಅನುಪ್ರಾಸಿಕ ಶಬ್ದಗಳನ್ನು ಹೇಳುವದು. ಪ್ರತಿಯೊಂದು ಭಾಗಕ್ಕೆ ೧ ಮಿನೀಟು. ೩ರಲ್ಲಿ ೨ ಸಮ).

"ನಿನಗೆ ಅನುಪ್ರಾಸಿಕ ಶಬ್ದಗಳೆಂದರೇನು ಗೊತ್ತದೆ ಏನು? ಅನುಪ್ರಾಸಿಕ ಶಬ್ದ ಅಂದರೆ ಒಂದು ಶಬ್ದದ ಹಾಗೆ ಪ್ರಾಸವಿದ್ದಂಥ ಇನ್ನೊಂದು ಶಬ್ದವು. ಎರಡು ಶಬ್ದಗಳ ಕಡೆಯ ಅಕ್ಷರಗಳು ಒಂದೇ ಇದ್ದರೆ ಅವಕ್ಕೆ ಅನುಪ್ರಾಸಿಕ ಶಬ್ದಗಳೆನ್ನುತ್ತಾರೆ. ತಿಳಿಯಿತೇನು? ಉದಾಹರಣಾರ್ಥವಾಗಿ—'ರಾಮು', 'ದಾಮು'—ಇವು ಅನುಪ್ರಾಸಿಕ ಶಬ್ದಗಳು. ಇವುಗಳ ಕಡೆಯ ಅಕ್ಷರಗಳು ಒಂದೇ ಇರುತ್ತವೆ. 'ರಾಮು', 'ದಾಮು', 'ಕಾಮು', 'ಸೋಮು'—ಇವೆಲ್ಲ ಅನುಪ್ರಾಸಿಕ ಶಬ್ದಗಳು. ಈಗ ನಿನಗೆ ನಾನು ಒಂದು ಶಬ್ದವನ್ನು ಕೊಡುತ್ತೇನೆ. ಒಂದು ಮಿನೀಟಿನೊಳಗೆ ನಿನಗೆ ಬರುವಷ್ಟು ಇದರ ಅನುಪ್ರಾಸಿಕ ಶಬ್ದಗಳನ್ನು ಹೇಳು. ಈಗ ಒಂದು ಶಬ್ದವನ್ನು ಹೇಳುತ್ತೇನೆ—'ಕೂಗು'. ಇದೇ ಪ್ರಾಸದ ನಿನಗೆ ನೆನಪಾಗುವಷ್ಟು ಶಬ್ದಗಳನ್ನು ಹೇಳು."

ಹುಡುಗನು ಅರ್ಥ ಆಗದಂಥ ಶಬ್ದಗಳನ್ನು ಕೊಡಲಿಕ್ಕೆ ಹತ್ತಿದರೆ—"ನೀನು ಕೊಟ್ಟ ಶಬ್ದಗಳ ಅರ್ಥ ಆಗಬೇಕು" ಎಂದು ಅನ್ನಬೇಕು.

ಹುಡುಗನಿಗೆ ಈ ಶಬ್ದದ ಅನುಪ್ರಾಸಿಕ ಶಬ್ದಗಳನ್ನು ಕೊಡಲಿಕ್ಕೆ ಬಾರದಿದ್ದರೆ ಇಂಥ ಮೂರು ಶಬ್ದಗಳನ್ನು ಪರೀಕ್ಷಕನು ತಾನೇ ಕೊಟ್ಟು ಕೆಳಗಿನಂತೆ ಮುಂದೆ ಅನ್ನಬೇಕು—

"ಇವೆಲ್ಲ 'ಕೂಗು' ಈ ಶಬ್ದದಂತೆಯೇ ಕಿವಿಗೆ ಕೇಳಿಸುತ್ತವೆ. ಅಹುದಲ್ಲ?"

ಹುಡುಗನು ಸರಿಯಾದ ಶಬ್ದಗಳನ್ನು ಕೊಟ್ಟಿದ್ದರೆ ಮುಂದೆ ಅಥವಾ ತಪ್ಪಿದಾಗ ಮೇಲಿನಂತೆ ತಿಳಿಸಿಕೊಟ್ಟ ಬಳಿಕ ಕೆಳಗಿನಂತೆ ಅನ್ನಬೇಕು—

"ಈಗ ಇನ್ನೊಂದು ಮಿನೀಟನ್ನು ಕೊಡುತ್ತೇನೆ. ಈ ವೇಳೆಯಲ್ಲಿ 'ಭಟ್ಟ' ಈ ಶಬ್ದದ ಪ್ರಾಸವಿದ್ದ ಆದಷ್ಟು ಶಬ್ದಗಳನ್ನು ಕೊಡು."

ಇದೇ ಪ್ರಕಾರ "ಫಂಡ" ಈ ಮೂರನೇ ಶಬ್ದದ ವಿಷಯಕ್ಕೆ ಕೇಳಬೇಕು. ಈ ಶಬ್ದದ ಅನುಪ್ರಾಸಿಕ ಶಬ್ದಗಳನ್ನು ಕೊಡುವ ಮುಂದೆ ಅನುಸ್ವಾರವಿಲ್ಲದಂಥ ಶಬ್ದಗಳನ್ನು ಹುಡುಗನು ಕೊಡಲಿಕ್ಕೆ ಹತ್ತಿದರೆ "ಅನುಸ್ವಾರ ಬೇಕು" ಎಂದು ಅನ್ನಬೇಕು.

ಗುಣಗಳನ್ನು ಕೊಡುವ ಮುಂದೆ ಉದಾರತನದಿಂದ ಕೊಡಬೇಕು. ಅಂಕಿತನಾಮಗಳನ್ನೂ ಕೊಟ್ಟ ಶಬ್ದದ ಮೇಲಿಂದ ಬಂದ ಪ್ರತ್ಯಯವನ್ನು ಹಿಂದೆ ಹಚ್ಚಿ ಮಾಡಿದ ನಕಾರಾರ್ಥ ಶಬ್ದಗಳನ್ನೂ ಅವು ಪ್ರಾಸಕ್ಕೆ ಸರಿಯಾದರೆ ಸಮ ಎಂದು ತಿಳಿಯಬೇಕು.

**ಪ್ರಶ್ನೆ ೬.**—ಓದುವದು ಮತ್ತು ಬಳಿಕ ರಿಪೋರ್ಟ ಕೊಡುವದು (೮ ಸಂಗತಿಗಳು. ೨ ತಪ್ಪು ಮಾಫ. ೪೦ ಸೆಕಂಡು).

(ವರ್ಷ ೮, ಪ್ರಶ್ನೆ ೭ರಂತೆ.)

**ವೈಕಲ್ಪಿಕ ಪ್ರಶ್ನೆ ೧.**—ಶಬ್ದಕೋಶ—೨೫ ಶಬ್ದಗಳು.

(ವರ್ಷ ೯, ವೈಕಲ್ಪಿಕ ಪ್ರಶ್ನೆಯಂತೆ.)

**ವೈಕಲ್ಪಿಕ ಪ್ರಶ್ನೆ ೨.**—ತಿಂಗಳ ಹೆಸರು ಮತ್ತು ವರ್ಷವನ್ನು ಹೇಳುವದು (ಎರಡೂ ಸಮ).

"ಈ ತಿಂಗಳು ಯಾವುದು?"

"ಇದು ಯಾವ ವರ್ಷವು? ಇದು ಯಾವ ಇಸವಿಯು?"

ತಿಂಗಳ ಹೆಸರು ಹೇಳಬೇಕು. ಬರೇ ಅದರ ಅನುಕ್ರಮ ನಂಬರು ಉಪಯೋಗದ್ದಲ್ಲ. ಹಾಗೂ ಇಸವಿಯನ್ನು ಹೇಳಬೇಕು. ಎರಡೂ ಕ್ರಿಶ್ಚನ್ ಕ್ಯಾಲೆಂಡರ ಪ್ರಕಾರ.

(ವರ್ಷ ೭, ವೈಕಲ್ಪಿಕ ಪ್ರಶ್ನೆ ನೋಡಿರಿ.)

## ವರ್ಷ ೧೨

**ಪ್ರಶ್ನೆ ೧.**—ಅಸಂಬದ್ಧತನವನ್ನು ಕಂಡುಹಿಡಿಯುವದು (೫ರಲ್ಲಿ ೩. ಪ್ರತಿಯೊಂದಕ್ಕೆ ೨/೩ ಮಿನೀಟು. ೫ ಸೆಕಂಡಿನ ಮೇಲೆ ಎರಡನೇ ಸಾರಿ ಓದಬೇಕು).

ಹುಡುಗನ ಲಕ್ಷ್ಯವನ್ನು ಎಳಕೊಂಡು ಕೆಳಗಿನಂತೆ ಅನ್ನಬೇಕು—

"ನಾನು ಈಗ ಒಂದು ವಾಕ್ಯವನ್ನು ಓದುತ್ತೇನೆ. ಅದರೊಳಗೆ ಏನೋ ತಪ್ಪು ಅದೆ; ಏನಾದರೂ ಹುಚ್ಚತನ ಅದೆ. ಲಕ್ಷ್ಯಗೊಟ್ಟು ಕೇಳು ಮತ್ತು ಅದರೊಳಗೆ ಏನು ತಪ್ಪು ಅಥವಾ ಹುಚ್ಚತನ ಅದೆ ಹೇಳು."

ಮುಂದೆ ಕೆಳಗಿನ ಪ್ರತಿಯೊಂದು ಅವತರಣವನ್ನು ಮೇಲೆ ಹೇಳಿದಂತೆ ಎರಡು ಸಾರಿ ಓದಬೇಕು. ಓದುವಾಗ ಸಾವಕಾಶವಾಗಿ ಮುಖ್ಯ ಶಬ್ದಗಳ ಮೇಲೆ ಆಘಾತ ಕೊಟ್ಟು ಅರ್ಥವು ಸ್ಪಷ್ಟವಾಗುವ ಹಾಗೆ ಓದಬೇಕು.

(ಅ) "ಒಬ್ಬ ಮನುಷ್ಯನು ಅಂದನು—'ನಾನು ಒಂದು ಮಾರ್ಗವನ್ನು ಬಲ್ಲೆ; ಅದು ನನ್ನ ಮನೆಯ ಕಡೆಯಿಂದ ಪೇಟೆಯ ಕಡೆಗೆ ಇಳಕಲಾಗಿ ಹೋಗುತ್ತದೆ. ಮತ್ತು ತಿರುಗಿ ಪೇಟೆಯ ಕಡೆಯಿಂದ ನನ್ನ ಮನೆಯ ಕಡೆಗೆ ಇಳಕಲಾಗಿ ಬರುತ್ತದೆ.' "

"ಇದರೊಳಗೆ ಏನು ತಪ್ಪು ಅದೆ? ಏನು ಹುಚ್ಚತನ ಅದೆ?"

ಹುಡುಗನ ಉತ್ತರವು ಸ್ಪಷ್ಟವಾಗಿ ತಿಳಿಯದಿದ್ದರೆ ಮುಂದೆ ಕೆಳಗಿನಂತೆ ಕೇಳಬೇಕು—

"ನೀನು ಹೇಳಿದ್ದು ನನಗೆ ನೆಟ್ಟಗೆ ತಿಳಿದಿಲ್ಲ. ನೀನು ಏನು ಅನ್ನುತ್ತೀ ಇನ್ನೊಮ್ಮೆ ನೆಟ್ಟಗೆ ಹೇಳು. ನಾನು ಓದಿದ ವಾಕ್ಯದಲ್ಲಿ ಏನು ತಪ್ಪು ಅಥವಾ ಹುಚ್ಚತನ ಅದೆ?"

ಇದೇ ಪ್ರಕಾರ ಉಳಿದವುಗಳು.

(ಬ) "ಒಬ್ಬ ಇಂಜಿನ ಡ್ರಾಯವರನು ಅಂದನು—'ನಾನು ನನ್ನ ಇಂಜಿನಿಗೆ ಎಷ್ಟು ಹೆಚ್ಚು ಡಬ್ಬಿಗಳನ್ನು ಜೋಡಿಸುವೆನೋ ಅಷ್ಟು ತೀವ್ರ ನನ್ನ ಗಾಡಿಯು ಹೋಗುತ್ತದೆ.' "

(ಕ) "ನಿನ್ನೆ ಪೋಲೀಸರಿಗೆ ಒಬ್ಬ ಹುಡುಗಿಯ ಹೆಣವು ಸಿಕ್ಕಿತು. ಅದು ೧೮ ತುಂಡು ಆಗಿತ್ತು. ಆ ಹುಡುಗಿಯು ತನ್ನನ್ನು ತಾನೇ ಕೊಂದುಕೊಂಡಳೆಂದು ಜನರು ಅನ್ನುತ್ತಾರೆ."

ಒಮ್ಮೊಮ್ಮೆ ಹುಡುಗರು "ಇದು ತಪ್ಪು; ತನ್ನನ್ನು ತಾನೇ ಯಾರೂ ಕೊಂದುಕೊಳ್ಳುವದಿಲ್ಲ" ಎಂದು ಅನ್ನುತ್ತಾರೆ. ಆವಾಗ್ಗೆ ಹೀಗೆ ಅನ್ನಬೇಕು—

"ಜೀವ ಬೇಡಾಗಿರುತ್ತದೆ. ಒಮ್ಮೊಮ್ಮೆ ಕೊಂದುಕೊಳ್ಳುತ್ತಾರೆ."

(ಡ) "ನಿನ್ನೆ ಒಂದು ಉಗೆ ಬಂಡಿಯ ಅಪಘಾತವಾಯಿತು. ಆದರೆ ಅದು ಅಷ್ಟೇನೂ ಭಯಂಕರವಿದ್ದಿಲ್ಲ. ಬರೇ ೪೮ ಜನರು ಸತ್ತರು."

(ಈ) "ಒಬ್ಬ ಬಾಯಸಿಕಲ ಹತ್ತುವವನು ಒಂದು ಅಪಘಾತದಲ್ಲಿ ಬಾಯಸಿಕಲ್ಲಿನ ಮೇಲಿಂದ ಬಿದ್ದನು. ಅವನ ತಲೆಯು ಒಂದು ಕಲ್ಲಿನ ಮೇಲೆ ಅಪ್ಪಳಿಸಿತು; ಮತ್ತು ಅವನು ಕೂಡಲೆ ಸತ್ತನು. ಜನರು ಅವನನ್ನು ಎತ್ತಿಕೊಂಡು ದವಾಖಾನೆಗೆ ಒಯ್ದರು. ಇನ್ನು ಅವನಿಗೆ ಗುಣವಾಗಲಾರದೆಂದು ಅನ್ನುತ್ತಾರೆ."

ಬೇಕಾದ ಸಂಬದ್ಧವಾದ ಉತ್ತರವು ಸಮ ಎಂದು ತಿಳಿಯಬೇಕು.

ಹುಡುಗರ ಉತ್ತರಗಳು—

### ಸಮ

(ಅ) ಇಳಕಲಾಗಿ ಬರುತ್ತದೆ ಅಂದದ್ದು—ಏರಾಗಿ ಬರುತ್ತದೆ; ತಿರುಗಿ ಬರುವಾಗ ಇಳಕಲು ಹ್ಯಾಗೆ ಇರುತ್ತದರಿ; ತಿರುಗಿ ಪೇಟೆಯ ಕಡೆಯಿಂದ ಇಳಕಲಾಗಿ ತಪ್ಪು ಅದೆ; ತಿರುಗಿ ಏರಿಕೆಯಾಗಿ ಬರುತ್ತದೆ; ಹೋಗುತ್ತ ಇಳಕಲ ಬರುತ್ತ ಇಳಕಲ ಅದೆ ಅಂದನು—ಬರುವದು ತಪ್ಪು; ಒಂದೇ ಕಡೆಗೆ ಇಳಕಲಾಗುತ್ತದೆ; ಎರಡೂ ಕಡೆಗೆ ಇಳಕಲು ಎಂದು ಹೇಳಿದನರಿ; ಬರಬೇಕಾದರೆ ಏರಾಗುತ್ತದೆ ಅನ್ನುವದು ಬಿಟ್ಟು ಇಳಕಲಾಗುತ್ತದೆ ಅಂದ; ಎರಡೂ ಕಡೆಗೆ ಇಳಕಲು ಅನ್ನುತ್ತಾನೆ; ಹೀಗೆ ಹೋಗಬೇಕಾದರೆ ಏರು ಆಗುತ್ತದೆ.

(ಬ) ಮೆಲ್ಲಕಾಸಿ ಹೋಗುತ್ತದೆ ಅನ್ನಬೇಕಾಗಿತ್ತು; ಎಷ್ಟು ಹೆಚ್ಚು ಕೂಡಿಸುತ್ತಾನೆ ಅಷ್ಟು ಸಾವಕಾಶ ಹೋಗುತ್ತದೆ; ಹೆಚ್ಚು ಡಬ್ಬಿ ಹಚ್ಚಿ

ದಾಗ ತೀವ್ರ ಹೋಗುತ್ತದೆ ತಪ್ಪು—ಸಾವಕಾಶ ಹೋಗುತ್ತದೆ ಅನ್ನಲಿಕ್ಕೆ ಅಡ್ಡಿ ಇಲ್ಲ; ಎಷ್ಟು ಕಡಿಮೆ ಡಬ್ಬಿ ಅನ್ನಬೇಕು; ಹೆಚ್ಚು ಮಂದಿ ಆದರೆ ಅಷ್ಟು ಹೋಗುವದಿಲ್ಲ ಅದಕ್ಕೆ; ಅಷ್ಟು ತೀವ್ರ ಹೋಗುವದಿಲ್ಲ; ಎಷ್ಟು ಹೆಚ್ಚು ಮಾಡಿದ ಹಾಗೆ ಜೋರ ಹೋಗುವದಿಲ್ಲ; ಬಹಳ ಹಚ್ಚಿದರೆ ಎಳಕೊಂಡುಹೋಗುವದು ಆಗುವದಿಲ್ಲರಿ; ಜನ ಬಹಳ ಆಗಿ ಮೆಲ್ಲಕಾಸಿ ಹೋಗುತ್ತದೆ.

(ಕ) ತನ್ನಷ್ಟಕ್ಕೆ ತಾನೇ ೧೮ ತುಂಡು ಮಾಡಿಕೊಳ್ಳುವದು ಶಕ್ಯವಿಲ್ಲ; ತನ್ನಿಂದ ತಾನೇ ತಪ್ಪು—೧೮ ತುಂಡು ಹ್ಯಾಗೆ ಆಗುತ್ತವೆ; ತನ್ನ ಕೈಲೆ ಒಂದೇ ತುಂಡು ಆಗುತ್ತದೆ—೧೮ ತುಂಡು ಆಕೆಯು ಕೈಲೆ ಆಗುವದಿಲ್ಲ; ತನ್ನಸ್ನೇ ಕೊಂದುಕೊಂಡರೆ ಮೊದಲನೇ ಪೆಟ್ಟಿಗೆ ಸತ್ತುಹೋಗುತ್ತಾಳೆ—ಮತ್ತು ತುಂಡು ಮಾಡಲಿಕ್ಕೆ ಬರುವದಿಲ್ಲ; ತಾನೇ ಕೊಂದುಕೊಂಡಿಲ್ಲ—ತುಂಡು ತುಂಡು ಆಗಿ ಬಿದ್ದಿದ್ದವು; ೧೮ ತುಂಡು ಆಗುವದಿಲ್ಲರಿ.

(ಡ) ಏನೂ ಆಗಿಲ್ಲ ಅಂದದ್ದು—ಬಹಳ ಅಪಘಾತ ಆಗಿದೆ ಅನ್ನಬೇಕಾಗಿತ್ತು; ಅಷ್ಟುಮಂದಿ ಸತ್ತಿರುತ್ತಾರೆರಿ—ಅಷ್ಟು ಭಯಂಕರ ಇಲ್ಲ ಅಂದರೆ ತಪ್ಪು; ಅಷ್ಟೇನೂ ಭಯಂಕರವಿದ್ದಿಲ್ಲ ಅನ್ನುತ್ತಾನೆ—ಮತ್ತು ೪೮ ಜನರು ಸತ್ತರು ಅನ್ನುತ್ತಾನೆ; ಭಯಂಕರ ಇತ್ತು; ೪೮ ಜನರು ಸತ್ತರು ದೊಡ್ಡ ಅಪಘಾತ ಅಲ್ಲ ಅಂದನು—ದೊಡ್ಡ ಅಪಘಾತವಾಯಿತು; ೪೮ ಜನರು ಅಂದರೆ ಬಹಳ ಆಯಿತು; ಸ್ವಲ್ಪ ಪೆಟ್ಟು ಹತ್ತಿದರೆ ೪೮ ಮಂದಿ ಸಾಯುವದಿಲ್ಲರಿ; ಅಪಘಾತ ಆಗದೇ ಇದ್ದರೆ ಅಷ್ಟುಮಂದಿ ಸಾಯುವದಿಲ್ಲರಿ.

(ಈ) ಅವರು ದವಾಖಾನೆಗೆ ಒಯ್ದರು ಎಂಬದು—ಸತ್ತಕೂಡಲೆ ದವಾಖಾನೆಗೆ ಒಯ್ದದ್ದು—ದವಾಖಾನೆಗೆ ಒಯ್ಯುವದು ಬದಲಿ ಮನೆಗೆ ಒಯ್ಯಬೇಕಿತ್ತು; ಸತ್ತ ಮೇಲೆ ದವಾಖಾನೆಗೆ ಯಾಕೆ ಒಯ್ಯುತ್ತಾರೆರಿ; ಸತ್ತಾನೆ ಇನ್ನು ಹ್ಯಾಗೆ ಅವನಿಗೆ ಗುಣ ಆಗುತ್ತದೆ; ಅವನು ಸತ್ತಿದ್ದನು—ಮತ್ತು ಅವರು ಒಯ್ದದ್ದು ತಪ್ಪು ಅದೆ; ದವಾಖಾನೆಗೆ ಒಯ್ದದ್ದು ತಪ್ಪು—ಅವನ ಜೀವ ಹೋಗಿತ್ತು; ಸತ್ತಿದ್ದನು—ಬದುಕಲಾರನು; ಬಿದ್ದಕೂಡಲೆ ಸತ್ತಿದ್ದನು—ಮೊದಲೇ ಸತ್ತಿದ್ದನು; ಸತ್ತದ್ದು ಖರೆ ಗುಣ ಆಗುವದಿಲ್ಲ ಅನ್ನಬಾರದು.

ತಪ್ಪು

(ಅ) ಇಳಕಲಾಗಿ ಬರುತ್ತದೆ ತಪ್ಪು—ಇಳಕಲು ನಮ್ಮ ಸಂಗತಿ ಬರುವದಿಲ್ಲ; ಇಳಿಜಾರ ಆಗಿ ಹೋಗುತ್ತದೆ ತಪ್ಪು ಅದೆರೆ ಇಳಿಜಾರ ಆಗಿ ಹೋಗಬಾರದು; ಇಳಕಲಾಗಿ ಬರುತ್ತದೆ.

(ಬ) ನಡಿಯುವಷ್ಟೇ ನಡಿಯುತ್ತದೆ; ಹೆಚ್ಚು ಗಾಡಿ ಹಾಕಿದರೆ ತೀವ್ರ ವಾಗಿ ಹೋಗುತ್ತದೆ ಅಂದ—ಚಲೋ ನಡಿಸಿದರೆ ಲಗು ಹೋಗುತ್ತದೆ; ಇಂಜಿನಿಗೆ ತಪ್ಪು ಅದೆ—ಇಂಜಿನಕ್ಕೆ ಬೇಕು; ತೀವ್ರ ತಪ್ಪು ಅದೆ—ತೀವ್ರ ವಾಗಿ ಹೋಗಬಾರದು; ಹೆಚ್ಚು ಹೋಗುವದು.

(ಕ) ತನ್ನನ್ನು ತಾನೇ ಕೊಂದುಕೊಂಡದ್ದು—ಆಕೆ ಹೋಗಬೇಕಾದರೆ ಕಳ್ಳರು ಕೊಂದರು; ಮಂದಿ ಬಂದು ಕಡಿದರು—ಆಕೆಗೆ ಅವರಿಗೆ ಏನಾದರೂ ಸಿಟ್ಟು ಇದ್ದೀತು; ಪೋಲೀಸರು ಕೊಂದದ್ದು ತಪ್ಪು; ಮಂದಿ ಕೊಂದಿದ್ದರು—ಕೆಟ್ಟ ಕೆಲಸಮಾಡಿರಬೇಕು; ತನ್ನನ್ನು ತಾನೇ ಕೊಂದು ಕೊಂಡದ್ದು—ಸುಳ್ಳೇ ಕೊಂದುಕೊಳ್ಳುವದಿಲ್ಲ; ಜನರದೇ ತಪ್ಪು; ಜನರು ತಮ್ಮಷ್ಟಕ್ಕೆ ತಾವೇ ಅನ್ನಲಿಕ್ಕೆ ಹತ್ತಿದರು; ಒಬ್ಬಾಕೆನೇ ತನ್ನನ್ನು ಕೊಲ್ಲಲಿಕ್ಕೆ ಬರುವದಿಲ್ಲ; ಸಿಪಾಯರು ಕೊಂದರು ಹಣ ತಕ್ಕೊಂಡಾರೆ; ತಾನೇ ಕೊಂದದ್ದು.

(ಡ) ಗಾಡಿ ಮುರಿದದ್ದು ತಪ್ಪು; ಉಗೆಬಂಡಿ ಹೊರಳಿಕೊಂಡು ಬಿತ್ತು; ಅಷ್ಟೇನು ಆಗಿಲ್ಲ—ಗಾಡಿ ಹೊರಳಿ ಬಿದ್ದದ್ದು; ಬಿದ್ದರೆ ಅಷ್ಟರೂ ಸಾಯುತ್ತಾರೆ; ಗಾಡಿ ಇಂಜಿನ ಹೋಗುತ್ತಿರುತ್ತದೆ—ಹಿಂದೆ ಮುಂದೆ ನೋಡುವದಿಲ್ಲ; ಇಂಜಿನದೊಳಗೆ ಯಂತ್ರ ಇತ್ತು ಅದು ಕೆಟ್ಟಿತ್ತು; ಕೆಲ ಜನರು ಸತ್ತಿಲ್ಲ; ಕೆಲ ಮಂದಿ ತಪ್ಪು, ಹೆಚ್ಚು ಸತ್ತಿದ್ದರು; ಕೆಲ ಮಂದಿ ತಪ್ಪು—ಗಾಡಿ ಬಿದ್ದದೆ; ಕೇವಲ ತಪ್ಪು, ಬಹಳ ಬೇಕು; ಸತ್ತದ್ದು.

(ಈ) ಅವನ ಸಾಯಕಲ್ಲಿಗೆ ಕಲ್ಲು ಬಡೆದು ಅಪ್ಪಳಿಸಿ ಸತ್ತುಹೋದನು; ಗುಣವಾಗುವದಿಲ್ಲ ಎಂಬದು ತಪ್ಪು; ಗುಣವಾಗುವದಿಲ್ಲರೆ; ಬಾಯಸಿಕಲ ಮೇಲೆ ಹೋಗಬೇಕಾದರೆ ಇದರೊಳಗೆ ಬಿದ್ದದ್ದೇ ತಪ್ಪು; ಸಾಯಕಲ ನೆಟ್ಟಗೆ ಒಯ್ದಿಲ್ಲ; ಬರೋಬರಿ ಅದೆ; ಸಾಯಕಲ ಮೇಲೆ ಬಿದ್ದದ್ದು.

**ಪ್ರಶ್ನೆ ೨.**—ರಚನೆಯ ಕೂಟಪ್ರಶ್ನೆಯು (ಹೀಲೇ ಮತ್ತು ಫರ್ನಾಲ್ಡ. ೫ ಮಿನೀಟಿನಲ್ಲಿ ೩ ಸಾರಿ).

ಕೆಳಗಿನ ಆಕೃತಿಯಲ್ಲಿ ಫಾರ್ಮಬೋರ್ಡಿನ ಸಮೂನೆಯು ತೋರಿಸಿದ್ದದೆ, ಅದು ಕುಶಲರಾದ ಬಡಿಗರ ಕಡೆಯಿಂದ ತಮ್ಮ ಊರಲ್ಲೇ ಸಮವಾಗಿ ಅಳತೆಕೊಟ್ಟು ಮಾಡಿಸಿಕೊಳ್ಳಬಹುದು. ಹೊರಗಿನ ಫ್ರೇಮಿನ ಕಟ್ಟಿಗೆಯು $\frac{೧}{೨}$ ಇಂಚು ದಪ್ಪವಿರಬೇಕು. ಅದರ ಒಂದು ಬದಿಯಲ್ಲಿ ಮಧ್ಯದಲ್ಲಿ ೪ ಇಂಚು ಉದ್ದ, ೩ ಇಂಚು ಅಗಲ ಮತ್ತು $\frac{೧}{೪}$ ಇಂಚು ಆಳವಿದ್ದಂಥ ಒಂದು ಕಾಟಕೋಣ ಚೌಕೋಣ ತೆಗ್ಗನ್ನು ಕೊರೆಯಬೇಕು. ಇದರೊಳಗೆ ಕೂಡ್ರಿಸುವ ೫ ತುಂಡುಗಳು $\frac{೧}{೪}$ ಇಂಚು ದಪ್ಪವಿರಬೇಕು.

ಅವುಗಳ ಉದ್ದ ಅಗಲಳತೆಗಳು ಕೆಳಗಿನಂತೆ ಇರಬೇಕು—



$೩ \times ೧\frac{೩}{೧೬}$ ಇಂಚು ; $೨\frac{೩}{೪} \times ೧$ ಇಂಚು ; $೨ \times ೧\frac{೧}{೪}$ ಇಂಚು ; $೧ \times ೧\frac{೧}{೨}$ ಇಂಚು ; $೧ \times ೧\frac{೧}{೨}$ ಇಂಚು.

ಫಾರ್ಮಬೋರ್ಡಿನ ಹೊರಗಿನ ಫ್ರೇಮು ಹುಡುಗನ ಎದುರಿಗೆ ಟೇಬಲಿನ ಮೇಲೆ ಅದರ ಉದ್ದವಾದ ಭುಜವನ್ನು ಹುಡುಗನ ಬದಿಗೆ ಮಾಡಿ ಇಡಬೇಕು. ಒಳಗೆ ಕೂಡ್ರಿಸುವ ತುಂಡುಗಳನ್ನು ಹುಡುಗನ ಎದುರಿಗೆ ಅದಕ್ಕಿಂತ ಸ್ವಲ್ಪದೂರ ಗುಂಪಾಗಿ ಇಡಬೇಕು. ಸಣ್ಣ ತುಂಡುಗಳು ಅವುಗಳ ಫ್ರೇಮಿನೊಳಗಿನ ಸ್ಥಳದಲ್ಲಿ ಸರಿಯಾಗಿ ಕೂಡ್ರಿಸಿದ ಸ್ಥಿತಿಯಲ್ಲಿ ಹುಡುಗನ ದೃಷ್ಟಿಗೆ ಬೀಳಬಾರದು. ಮುಂದೆ ಹುಡುಗನಿಗೆ ಕೆಳಗಿನಂತೆ ಅನ್ನಬೇಕು—

"ಇವೆಲ್ಲ ತುಂಡುಗಳನ್ನು ಈ ಚೌಕಿನಲ್ಲಿ ನೀನು ಆದಷ್ಟು ಬೇಗ ಬೇಗ ಕೂಡ್ರಿಸಬೇಕು. ನೀನು ಅವನ್ನು ಸರಿಯಾಗಿ ಕೂಡ್ರಿಸಿದರೆ ಎಲ್ಲ ಸ್ಥಳವು ಪೂರ ತುಂಬುವದು. ಮತ್ತು ಮೇಲೆ ಏನೂ ಬರಿಯ ಸ್ಥಳವು ಉಳಿಯುಲಾರದು. ಈಗ ಆರಂಭಿಸು."

ಈ ಪರೀಕ್ಷೆಯಲ್ಲಿ ಪಾಸಾಗಬೇಕಾದರೆ ಒಟ್ಟು ೫ ಮಿನೀಟಿನೊಳಗೆ ೩ ಸಾರಿ ಮಾಡಬೇಕು.

**ಪ್ರಶ್ನೆ ೩.**—ಭಾವವಾಚಕ ಶಬ್ದಗಳ ವ್ಯಾಖ್ಯೆಯನ್ನು ಹೇಳುವದು (೫ರಲ್ಲಿ ೩. ೧ ಮಿನೀಟಿನಲ್ಲಿ ಹುಡುಗನು ಉತ್ತರವನ್ನು ಕೊಡಲಿಕ್ಕೆ ಆರಂಭ ಮಾಡಬೇಕು).

ಕೆಳಗಿನ ಶಬ್ದಗಳನ್ನು ಕೊಡಬೇಕು—

೧. ದಯೆ. ೨. ಸೇಡು. ೩. ದಾಸ. ೪. ಮತ್ಸರ. ೫. ಅನ್ಯಾಯ.

"'ದಯೆ' ಅಂದರೇನು?"

"'ದಯೆ' ಎಂದು ನಾವು ಯಾತಕ್ಕೆ ಅನ್ನುತ್ತೇವೆ?"

ಒಮ್ಮೊಮ್ಮೆ ಹುಡುಗನು ಕೊಟ್ಟ ಶಬ್ದದಲ್ಲಿಯೇ ವ್ಯಾಖ್ಯೆಯನ್ನು ಕೊಡುತ್ತಾನೆ. ಉದಾಹರಣಾರ್ಥವಾಗಿ—"ದಯೆ ಅಂದರೆ ಒಬ್ಬನ ಮೇಲೆ ದಯೆ ಮಾಡುವುದು." ಆವಾಗ್ಗೆ ಕೆಳಗಿನಂತೆ ಅನ್ನಬೇಕು—

"ಸಮವದೆ, ಆದರೆ ಒಬ್ಬನ ಮೇಲೆ ದಯೆಮಾಡುವದು ಅಂದರೇನು?"

"ಸೇಡು" ಈ ಶಬ್ದವು ಕೆಲವು ಹುಡುಗರಿಗೆ ಒಮ್ಮೆಲೆ ಧ್ಯಾನದಲ್ಲಿ ಬರುವದಿಲ್ಲ. ಆವಾಗ್ಗೆ ಕೆಳಗಿನಂತೆ ಅನ್ನಬೇಕು—

"'ಸೇಡು ತೀರಿಸಿಕೊಳ್ಳುವದು', 'ಸೇಡು' ಅಂದರೇನು?"

ಶಾಸ್ತ್ರೋಕ್ತ ವ್ಯಾಖ್ಯೆಗಳು ಬೇಕಾಗಿಲ್ಲ. ಶಬ್ದದ ಸರಿಯಾದ ಅರ್ಥ

ವನ್ನು ಬೇಕಾದ ಶಬ್ದಗಳಲ್ಲಿ ಅಥವಾ ಬೇಕಾದ ಹಾಗೆ ಉದಾಹರಣೆಗಳನ್ನು ಕೊಟ್ಟು ಸ್ಪಷ್ಟಮಾಡಿದರೆ ಸಾಕು.

ಪ್ರತಿಯೊಂದು ವ್ಯಾಖ್ಯೆಯಲ್ಲಿ ಯಾವ ಯಾವ ತತ್ತ್ವಗಳು ಇರುವದು ಅವಶ್ಯವದೆ ಎಂದು ನೋಡುವದು ಬಹಳ ಮಹತ್ವದ್ದು—

**ದಯೆ**—ಇದರಲ್ಲಿ—(೧) ಬೇರೆಯವರು ಕಷ್ಟದಲ್ಲಿದ್ದಾಗ, (೨) ಅವರ ವಿಷಯಕ್ಕೆ ಸಹಾನುಭೂತಿಯ ವಿಚಾರ ಇರುವದು ಅಥವಾ ಅವರಿಗೆ ಸಹಾಯಮಾಡುವದು—ಈ ತತ್ತ್ವಗಳು ಇರಬೇಕು.

**ಸೇಡು**—ಇದರಲ್ಲಿ—(೧) ಬೇರೆಯವರು ಏನಾದರೂ ಕೇಡುಮಾಡಿದಾಗ, (೨) ಅವರಿಗೆ ತಿರುಗಿ ಏನಾದರೂ ಕೇಡುಮಾಡುವದು ಅಥವಾ ಮಾಡಲಿಕ್ಕೆ ಇಚ್ಛಿಸುವದು—ಇವೆರಡು ತತ್ತ್ವಗಳು ಇರಬೇಕು.

**ದಾನ**—ಇದರಲ್ಲಿ—(೧) ಬೇರೆಯವರು ಅಡಚಣಿಯಲ್ಲಿದ್ದಾಗ ಅಥವಾ ಬೇಡಲಿಕ್ಕೆ ಬಂದಾಗ ಅಥವಾ ಧಾರ್ಮಿಕ ವೃತ್ತಿಯಿಂದ, (೨) ಅವರಿಗೆ ಏನಾದರೂ ಕೊಡುವದು—ಈ ತತ್ತ್ವಗಳು ಇರಬೇಕು.

**ಮತ್ಸರ**—ಇದರಲ್ಲಿ—(೧) ಬೇರೆಯವರಿಗೆ ಯಾವದೇ ರೀತಿಯಿಂದ ಚಲೋ ಆದಾಗ, (೨) ತಮ್ಮ ಮನಸ್ಸಿಗೆ ಅಸಮಾಧಾನ ಆಗುವದು—ಈ ತತ್ತ್ವಗಳು ಇರಬೇಕು.

**ಅನ್ಯಾಯ**—ಇದರಲ್ಲಿ—(೧) ಯಾವನೊಬ್ಬನು ಏನಾದರೂ ಮಾಡಿದಾಗ ಅಥವಾ ಅಂದಾಗ, (೨) ಮತ್ತೊಬ್ಬನು ಅವನಿಗೆ ಅನುಚಿತವಾದ ಏನಾದರೂ ಶಿಕ್ಷೆಯನ್ನಾಗಲಿ, ಬೇರೆ ಸಂಗತಿಯನ್ನಾಗಲಿ ಮಾಡುವದು—ಈ ತತ್ತ್ವಗಳು ಇರಬೇಕು. ಒಮ್ಮೊಮ್ಮೆ ಒಬ್ಬನೇ—(೧) ಏನಾದರೂ ಮಾಡಿ ಅಥವಾ ಯೋಚಿಸಿ, (೨) ಮುಂದೆ ಅದನ್ನು ತಾನು ಮಾಡಲಿಲ್ಲ ಅಥವಾ ಯೋಚಿಸಲಿಲ್ಲ ಎಂದು ಹೇಳುವದು—ಈ ತತ್ತ್ವಗಳು ಇರಬೇಕು.

ಹುಡುಗರ ಉತ್ತರಗಳು—

ದಯೆ

(ಅ) ಯಾವನಾದರೂ ಮನುಷ್ಯನು ತನಗೆ ಹೊಡೆದನಂದರೆ ಅವನಿಗೆ ದಯಾ ತೋರಿಸುವದು ; ಬಡವ ಇರುತ್ತಾನೆ ಅವನಿಗೆ ಸಂಕಟ ಕಾಲದಲ್ಲಿ

ದುಡ್ಡುಕೊಟ್ಟರೆ; ಪ್ರಾಣಿ ಸತ್ತಿರುತ್ತದೆ, ಕೆಟ್ಟ ಅನಿಸುತ್ತದೆ—ಕೆಟ್ಟ ಅನು ಭವಿಸುವದು ನೋಡಿ; ಯಾವನೊಬ್ಬವನಿಗೆ ಕೈಲೆ ಆಗದಿದ್ದವನಿಗೆ ಸಹಾಯಮಾಡಿದರೆ; ಯಾರಾದರೂ ಕುರುಡರು ಅಥವಾ ಕುಂಟರು ಮನೆಗೆ ಬಂದರೆ ನಮ್ಮ ಎದೆ ಕರಗಿ ನಾವು ಏನಾದರೂ ಅವರಿಗೆ ಕೊಡು ತ್ತೇವೆ; ಯಾರಾದರೂ ಭಿಕ್ಷೆ ಬೇಡಲಿಕ್ಕೆ ಬಂದರೆ ಅವರಿಗೆ ಒಂದು ದುಡ್ಡು ಕೊಟ್ಟರೆ ದಯೆ ತೋರಿಸಿದ ಹಾಗೆ ಆಯಿತು; ಯಾವನಾದರೂ ಖೂನೀ ಮಾಡಿದ್ದ—ಅವನಿಗೆ ಬಿಡಬೇಕಾದರೆ ಮಾಫಿ ಮಾಡುವದು; ಅವರೇನಾ ದರೂ ಸಂಕಟದೊಳಗೆ ಇದ್ದರೆ ಅವರನ್ನು ಪಾರಮಾಡುವದು; ಎರಡನೇ ದವರ ಮೇಲೆ ಸಿಟ್ಟಿಗೇಳದೆ ಇರುವದು—ಅವರು ಏನಾದರೂ ತಪ್ಪುಮಾಡಿ ದರೆ ಬಿಟ್ಟುಬಿಡುವದು; ಯಾವನಾದರೂ ಹೊಡೆಯಲಿಕ್ಕೆ ಹೋದಾಗ ಹೊಡೆಯುವವನಿಗೆ ಹೇಳಬೇಕು—ಪಾಪ ದಯಾ ತೋರಿಸು ಹೊಡೆಯ ಬೇಡ ಅನ್ನುವದು; ಪ್ರಾಣಗಳಿಗೆ ನೋವನ್ನು ಕೊಡದೆ ಪ್ರೀತಿಯಿಂದ ಸಲಹುವದು.

(ಬ) ಯಾವನಾದರೂ ಮನುಷ್ಯನು ತಮಗೆ ಕೆಟ್ಟ ಮಾಡಿದನೆಂದರೆ, ಅವನಿಗೆ ತಿರುಗಿ ಪ್ರತೀಕಾರಮಾಡುವದು; ವೈರಿ ಇರುತ್ತಾನೆ, ಅವನಿಗೆ ಹೊಡೆದು ಸೇಡು ತೀರಿಸಿಕೊಳ್ಳುವದು; ಒಬ್ಬ ಮನುಷ್ಯ ಕೆಟ್ಟಕೆಲಸ ಮಾಡಿರುತ್ತಾನೆ ಅದನ್ನು ಮನಸ್ಸಿನೊಳಗೆ ಇಟ್ಟುಕೊಂಡು ಪ್ರತೀಕಾರ ಮಾಡುತ್ತಾನೆ; ಯಾವನೊಬ್ಬನು ನಮಗೆ ಕೆಟ್ಟ ಮಾಡಿದರೆ ಅವನು ನಮ್ಮ ಕೈಯೊಳಗೆ ಸಿಕ್ಕಾಗ ತಿರುಗಿ ಅನ್ನುವದು; ಯಾವನಾದರೂ ಮನುಷ್ಯನಿಗೆ ಬೇರೆಯುವನು ಸುಮ್ಮಸುಮ್ಮನೆ ಹೊಡೆದರೆ ತಿರುಗಿ ಹೊಡೆ ಯುತ್ತೇನೆ ಎಂತ ಸ್ಫೂರ್ತಿ ಉತ್ಪನ್ನವಾಗುತ್ತದೆ; ಯಾರಾದರೂ ಒಂದು ಸ್ವಲ್ಪ ಹೊಡೆದರೆ ಅವರಿಗೆ ಮತ್ತೊಮ್ಮೆ ಸಿಕ್ಕಿದಾಗ ಹೊಡೆಯುವದಕ್ಕೆ; ಯಾರೊಬ್ಬರು ಕೆಟ್ಟ ಮಾಡಿದ ಘಳಿಗ್ಗೆ ನಾವು ತಿರುಗಿ ಅವರಿಗೆ ಕೆಟ್ಟ ಮಾಡುತ್ತೇವೆ ಅದಕ್ಕೆ; ಯಾವನಾದರೂ ನನಗೆ ಹೊಡೆದರೆ ನಿನಗೆ ಮತ್ತೊಮ್ಮೆ ಹೊಡೆಯುತ್ತೇನೆ ಎಂದು ಮನಸ್ಸಿನೊಳಗೆ ಇಟ್ಟುಕೊಳ್ಳು ವದು; ಎರಡನೆಯುವರು ಏನಾದರೂ ಕೆಟ್ಟ ಮಾಡಿದರೆ ನಾವೂ ಕೆಟ್ಟ ಮಾಡಿದರೆ; ಯಾವನಾದರೂ ಕೇಡು ಬಗೆದರೆ ಅವನಿಗೆ ತಿರುಗಿ ಕೇಡು ಬಗೆಯುವದು.

(ಕ) ಬಿಕ್ಕೆ ಬೇಡುವವರಿಗೆ ನೀಡುವದು ; ಮನೆಗೆ ಭಿಕ್ಷುಕರು ಬಂದರೆ ಅವರಿಗೆ ಏನಾದರೂ ಕೊಡುವದು ; ಏನಾದರೂ ತಿರುಗಿ ಇಸಕೊಳ್ಳುವ ಹಾಗೆ ಇಲ್ಲ ಹೀಗೆ ಸಾಮಾನ ಕೊಟ್ಟರೆ ; ಕೆಲವರಿಗೆ ಸಾಮಾನುಗಳನ್ನು ಕೊಡುತ್ತಾರೆ—ತಿನ್ನಲಿಕ್ಕೆ ಉಣ್ಣಲಿಕ್ಕೆ ಇಲ್ಲದಿದ್ದರೆ ಅನ್ನ ಹಾಕುತ್ತಾರೆ—ಭಾವಿಕತನದಿಂದ ದಾನ ಕೊಡುತ್ತಾರೆ ; ಮಂದಿಗೆ ಕೈಯೆತ್ತಿ ಕೊಡುವದು—ಇಲ್ಲದವರಿಗೆ ; ಯಾರಾದರೂ ಸತ್ತ ಮೇಲೆ ಹತ್ತು ದಿವಸ ಆದ ಮೇಲೆ ಬ್ರಾಹ್ಮಣರಿಗೆ ಅರಿವೆ, ಅಂಚಡಿ, ಭಾಂಡಿ ಕೊಡುತ್ತಾರೆ ; ಕೊಡುವದು ಏನಾದರೂ ಕೊಟ್ಟು ತಿರುಗಿ ಇಸಕೊಳ್ಳಬಾರದು ; ಬಡಬಗ್ಗರಿಗೆ ಊಟದ ಸಲುವಾಗಿ ರೊಕ್ಕ ಕೊಟ್ಟರೆ ; ಎರಡನೇಯವರಿಗೆ ಅರಿವೆ, ಅಂಚಡಿ ಬೇಡಿದರೆ ಅವರಿಗೆ ಕೊಡುವದು ; ಬಡಬಗ್ಗರಿಗೆ ಉಪಕಾರದ ಸಲುವಾಗಿ ಫುಕಟ ಏನು ಕೊಟ್ಟಿರುತ್ತಾರೆ ; ಹೊಟ್ಟೆಗೆ ಅನ್ನ ಇಲ್ಲದವರಿಗೆ ಇದ್ದವರು ಏನಾದರೂ ಕೊಡುವದು.

(ಡ) ಒಬ್ಬವನು ಅಭ್ಯುದಯದೊಳಗೆ ಇದ್ದರೆ ಅವನಿಗೆ ನೋಡಿ ಇವನಿಗೆ ಮತ್ಸರ ಆಗುತ್ತದೆ ; ಒಬ್ಬವನ ಏಳಿಗೆ ಆಗಿರುತ್ತದೆ—ಅದರ ಸಹನ ಆಗುವದಿಲ್ಲ—ತಿರಸ್ಕಾರಮಾಡುತ್ತಿರುತ್ತಾನೆ; ಹೊಟ್ಟೇಕಿಚ್ಚು—ಒಬ್ಬವನಿಗೆ ಚಲೋ ಆಗಿದ್ದರೆ ಅವನಿಗೆ ಆಗಬಾರದಿತ್ತು ನಮಗೆ ಆಗಬೇಕಾಗಿತ್ತು ಅನ್ನುವದು ; ಮಂದಿ ಕೆಲವರು ಸುಖದಿಂದ ಇರುತ್ತಾರೆ—ನಾವು ದುಃಖದಿಂದ ಇರುತ್ತೇವೆ—ನಾವು ಹಾಗೆ ಆಗಬೇಕೆಂದು ಇಚ್ಛೆಮಾಡುತ್ತೇವೆ—ಅವರಿಗೆ ಏನಾದರೂ ಕೆಡಕು ಮಾಡಬೇಕೆಂದು ಅನ್ನುತ್ತೇವೆ ; ಒಬ್ಬರು ನಮಗಿಂತ ಜಾಸ್ತಿ ಇದ್ದರೆ ಅವರಿಗೆ ಕೆಟ್ಟ ಮಾಡುವದು ; ಎರಡನೇದವರು ತಮಗಿಂತ ಮೇಲೆ ಬಂದರೆ ಅವರು ಕೆಳಗೆ ಹೋಗಬೇಕೆಂದು ಇಚ್ಛಿಸುವದು ; ಹೊಟ್ಟೇಕಿಚ್ಚು—ಒಬ್ಬವನು ಏನಾದರೂ ಚಲೋ ಡ್ರಾಯಿಂಗು ತೆಗೆದರೆ ಅದನ್ನು ಯಾವಾಗ ಕೆಡಿಸೇನು ಎಂದು ಮನಸ್ಸು ಬರುವದಕ್ಕೆ ; ಹೊಟ್ಟೇಕಿಚ್ಚು—ಅವನು ಚಲೋ ಮಾಡಿದನು ನನ್ನದು ಆಗಿಲ್ಲ ಅಂದರೆ ಅವನದು ಕೆಡಿಸಿ ಹೊಟ್ಟೇಕಿಚ್ಚು ಪಡುವದು ; ಯಾರಿಗಾದರೂ ನಮಗಿಂತ ಚಲೋದು ಕೊಟ್ಟರೆ ಅವರಿಗೆ ಯಾಕೆ ಚಲೋದು ನಮಗೆ ಯಾಕೆ ಕೆಟ್ಟದು ಅನ್ನುವದು.

(ಈ) ಯಾವನಾದರೂ ಮನುಷ್ಯನು ಸುಮ್ಮನೆ ಹೋಗುತ್ತಿದ್ದ ಅಂದರೆ

ಅವನಿಗೆ ಎರಡನೇದವರು ಹೊಡೆದರೆ; ಅವನು ಏನಾದರೂ ತಪ್ಪು ಮಾಡಿದರೆ ಅದರ ತಕ್ಕ ಶಿಕ್ಷೆ ಮಾಡದಿದ್ದರೆ; ಕೆಲವು ರೂಢಿ ಇರುತ್ತವೆ—ಅದರ ವಿರುದ್ಧ ಜನರಿಗೆ ಕೆಡಕು ಆಗುವ ಹಾಗೆ ಮಾಡಿದರೆ; ಯಾವದು ಬರೋಬರಿ ಅಲ್ಲ ಅದು ನ್ಯಾಯ ಎಂದು ಸುಳ್ಳಸುಳ್ಳೇ ಬಡದಾಡುವದು; ಯಾವದಾದರೂ ಕೆಲಸ ಎಲ್ಲಿ ಮಾಡಬಾರದು ಅಲ್ಲಿ ಮಾಡೇ ತೀರುವದಕ್ಕೆ; ಕೆಟ್ಟ ಕೆಲಸಮಾಡುವದು—ಸುಳ್ಳಸುಳ್ಳೇ ಜಗಳ ಮಾಡುವದು; ಯಾರಾದರೂ ಅರಸ ಜನರ ಕಡೆಯಿಂದ ಜುಲುಮಿಯಿಂದ ದುಡ್ಡನ್ನು ತಕ್ಕೊಳ್ಳುತ್ತಾನೆ ಅದಕ್ಕೆ; ಯಾವನಾದರೂ ಖರೆ ಕೆಲಸಮಾಡಿದರೆ ಅದನ್ನು ಉಲಟ ಮಾಡುವದು; ಎರಡನೇಯವರಿಗೆ ಕೆಟ್ಟ ಮಾಡುವದು—ನಾವು ತಕ್ಕೊಂಡಿದ್ದರೂ ತಕ್ಕೊಂಡಿಲ್ಲ ಅನ್ನುವದು; ಯಾವದಾದರೂ ಕೆಲಸದಲ್ಲಿ ನ್ಯಾಯವನ್ನು ಬಿಟ್ಟು ಮಾಡುವದು; ಬರೋಬರಿ ನೋಡಿದರೆ ಯಾವ ಪ್ರಕಾರದ್ದು ಆಗಬೇಕು ಅದರ ವಿರುದ್ಧ ಮಾಡುವದು; ಸುಳ್ಳಸುಳ್ಳೇ ಒಬ್ಬವನ ಮೇಲೆ ಅಪರಾಧ ಹೊರಿಸುವದು; ಇಬ್ಬರಿಗೂ ಅಷ್ಟೇ ಬಂದು ತನಗೆ ಬೇಕಾಗುವವರಿಗೆ ಬಹಳ ಕೊಡುವದು ಬೇಡಾದವರಿಗೆ ಕಡಿಮೆ ಕೊಡುವದು.

## ತಪ್ಪು

(ಅ) ಯಾರ ಮೇಲೆ ಒಂದು ಉಪಕಾರ ಮಾಡಿದರೆ; ಉಪಕಾರ ಮಾಡುವದು; ಯಾರಾದರೂ ಏನಾದರೂ ಹೊಡೆದರೆ ಬಡಿದರೆ ಅವರ ಮೇಲೆ ಸಿಟ್ಟಿಗೇಳದೆ ತಡಕೊಂಡರೆ; ದಾನಧರ್ಮ ಮಾಡುವದಕ್ಕೆ; ಅವರ ಕೂಡ ಪ್ರೀತಿಯಿಂದ ನಡಿಯುವದು; ಮನೆಗೆ ಬಂದವರಿಗೆ ಬೈಯ ಬಾರದು; ನೀವು ನಮಗೆ ಪಾಸ ಮಾಡಿದರೆ; ಅಂತಃಕರಣ—ಆಶೆ; ಚಲೋ—ಶರೀರಕ್ಕೆ; ಅಂತಃಕರಣ—ಅವನ ಜೋಡಿ ಜಗಳಾಡಬಾರದು; ಪ್ರೀತಿ—ಎಷ್ಟು ಶಾಂತ ನೋಡು ಅನ್ನುತ್ತೇವೆ; ಅಂತಃಕರಣ—ಸಂತೋಷ; ಇವನು ಬಹಳ ಚಲೋ ಇರುತ್ತಾನೆ; ಬುದ್ಧಿ ಚಲೋ ಉಳ್ಳವ.

(ಬ) ಮನುಷ್ಯನಿಗೆ ಸಿಟ್ಟುಬರುವದು; ಒಬ್ಬರ ಮೇಲಿನ ದ್ವೇಷ—ಒಬ್ಬ ಶತ್ರು ಇದ್ದ ಅವನಿಗೆ ಹೊಡೆಯಬೇಕೆಂದು ಹೇಳಿ; ಏನಾದರೂ ಸಿಟ್ಟು

ದ್ವೇಷ ಇದ್ದರೆ; ಕೆಟ್ಟ ಕೆಲಸಮಾಡಿರುತ್ತಾರೆ—ಅವರಿಗೆ ಹೊಡೆಯುತ್ತಾರೆ; ಸಿಟ್ಟು—ಏನಾದರೂ ಹೇಳಿದರೆ ಬೈಯುವದು ಹೊಡೆಯುವದು; ಇವನ ಸೇಡನ್ನು ತೀರಿಸಿಕೊಳ್ಳುವದು—ಇವನಿಗೆ ಹೊಡೆಯುತ್ತೇನೆ; ಯಾರು ಏನಾದರೂ ಮಾಡಿರುತ್ತಾರೆ ಅವರಿಗೆ ಸಿಟ್ಟು ಮಾಡುವದು; ಸಿಟ್ಟು—ಮನೆಯೊಳಗೆ ಮಾಡಿದರೆ; ಸಿಟ್ಟು—ಕೆಟ್ಟವೋರೆ.

(ಕ) ಬೇಡಿದ್ದು ಕೊಡುವದು; ಅವರಿಗೇನಾದರೂ ನಾವು ಸಹಾಯ ಮಾಡುವದು; ಏನಾದರೂ ವಸ್ತು ಕೊಡುವದು; ಎರಡನೇಯವರಿಗೆ ಏನಾದರೂ ಕೊಡುವದು; ಕೊಟ್ಟು ಬಿಡುವದು; ದಾನಧರ್ಮಗಳನ್ನು ಮಾಡುವದು—ಮಂದಿಗೆ ಏನಾದರೂ ದುಡ್ಡು ಕೊಡುವದು; ಯಾರಿಗಾದರೂ ಅಂಗೀ ಕೋಟು ಕೊಡುವದು.

(ಡ) ಇಬ್ಬಿಬ್ಬರ ನಡುವೆ ದ್ವೇಷ ಇದ್ದರೆ; ಬುದ್ಧಿ; ಒಬ್ಬರನ್ನು ಕೆಡಿಸಬೇಕು ಎಂಬದು ಗುಣ; ಪ್ರೀತಿ; ಯಾರಾದರೂ ಏನಾದರೂ ಕೆಲಸ ಮಾಡಿದರೆ ಸಿಟ್ಟಿಗೇಳುವದು; ಎರಡನೇಯವರು ಏನಾದರೂ ಮಾಡಿದರೆ ದುಃಖ ಪಡದೇ ಇರುವದು; ಕೆಟ್ಟ ಬುದ್ಧಿ.

(ಈ) ನ್ಯಾಯವಿಲ್ಲದೆ ಕೆಲಸಮಾಡುವದು—ತಪ್ಪು ಮಾಡುವದು; ಎರಡನೇಯವರ ಮೇಲೆ ಏನಾದರೂ ಮಾಡುವದು; ತಪ್ಪು; ಏನಾದರೂ ಕೆಟ್ಟ ಕೆಲಸಮಾಡಿದರೆ; ಎರಡನೇ ನ್ಯಾಯ—ಕೆದರಿ ಜಗಳ ತೆಗೆಯುವದು; ತಪ್ಪು—ಏನಾದರೂ ಆಡುತ್ತಿರುವಾಗ ಅವರು ಔಟ ಅಂದರೆ ಇವರು ಅಲ್ಲ ಅನ್ನುವದು; ಸುಳ್ಳು—ತಪ್ಪು—ಸತ್ಯ ಇಲ್ಲ; ಕೆಟ್ಟ ನ್ಯಾಯ—ಅರ್ಧ ಆಟಕ್ಕೆ ಬಿಟ್ಟುಬಿಡುವದು; ಏನೂ ತಪ್ಪಿಲ್ಲದಿದ್ದರೆ ಇವನದು ಏನೂ ಅನ್ಯಾಯವಿಲ್ಲ ಅನ್ನುತ್ತಾರೆ; ಇವನ ಮೇಲೆ ಕೆಟ್ಟ ಮಾಡುವದು.

**ಪ್ರಶ್ನೆ ೪.**—ಐದು ಅಂಕೆಗಳನ್ನು ತಿರುವು ಮುರುವು ಅನ್ನುವದು (೩ರಲ್ಲಿ ೧. ಸೆಕಂಡಿಗೆ ಒಂದರಂತೆ ಓದಬೇಕು).

ಈ ವರ್ಷದ ಅಂಕಮಾಲೆಗಳು—

೩—೧—೮—೭—೯; ೬—೯—೪—೮—೨; ೫—೨—೯—೬—೧

(ವರ್ಷ ೭, ಪ್ರಶ್ನೆ ೩ ಮತ್ತು ವರ್ಷ ೯, ಪ್ರಶ್ನೆ ೧ರಂತೆ.)

**ಪ್ರಶ್ನೆ ೫.**—ನೀತಿ ಕಥೆಗಳ ಸಾರವನ್ನು ಹೇಳುವದು (ಗುಣಗಳು

೪ ಅಂದರೆ ೨ ಪೂರ್ಣ ಸರಿ ಅಥವಾ ಅರ್ಧ ಅರ್ಧ ಸರಿ ಇದ್ದರೆ ೨ ಪೂರ್ಣ ಸರಿಯಾಗುವಷ್ಟು. ಪ್ರತಿಯೊಂದು ಪೂರ್ಣ ಸರಿಯಿದ್ದ ಉತ್ತರಕ್ಕೆ ೨ ಗುಣಗಳು. ಕಡೆಯ ಪ್ರಶ್ನೆ ಕೇಳಿದ ಮೇಲೆ ಹುಡುಗನ ಕಡೆಯಿಂದ ಉತ್ತರ ಬರಲಿಕ್ಕೆ ವೇಳೆಯ ಪರಮಾವಧಿಯು ೨ ಮಿನೀಟುಗಳು).

ಹುಡುಗನಿಗೆ ಕೆಳಗಿನಂತೆ ಅನ್ನಬೇಕು—

" ನಿನಗೆ ನೀತಿಕಥೆಗಳೆಂದರೇನು ಗೊತ್ತದೆ? ನೀತಿಕಥೆಗಳನ್ನು ನೀನು ಕೇಳಿದ್ದಿ ? ನೀತಿಕಥೆಯೆಂದರೆ ನಮಗೆ ಬೋಧವನ್ನು ಕೊಡುವಂಥ ಒಂದು ಸಣ್ಣ ಕಥೆಯು. ನಾನು ಈಗ ನಿನಗೆ ಒಂದು ನೀತಿಕಥೆಯನ್ನು ಓದಿ ಹೇಳುತ್ತೇನೆ. ಲಕ್ಷ್ಯಗೊಟ್ಟು ಕೇಳು. ನನ್ನದು ಮುಗಿದ ಮೇಲೆ ಈ ಕಥೆಯಿಂದ ನಾವು ಏನು ಕಲಿಯತಕ್ಕದ್ದೆಂಬದನ್ನು ನಿನ್ನನ್ನು ಕೇಳುವೆನು. ಈಗ ಕೇಳು."

(ಅ) " ದೇವರೂ ಬಂಡಿಯುವನೂ."

" ಒಬ್ಬಾನೊಬ್ಬ ಬಂಡಿಯುವನು ಬಂಡಿ ಹೊಡಕೊಂಡುಹೋಗುತ್ತಿರಲಾಗಿ ಒಂದು ಸ್ಥಳದಲ್ಲಿ ಗಾಲಿಗಳು ಕೆಸರಿನಲ್ಲಿ ಹೂತುಹೋದವು. ಆಗ ಬಂಡಿಯುವನು ಗಾಲಿಯ ಮಗ್ಗಲಿಗೆ ಬಂದು ಕುಳಿತು ತನ್ನ ದೇವರನ್ನು ಕುರಿತು—' ನನಗೆ ಬಂದಿರುವ ಕಷ್ಟವ ಬಿಡಿಸಪ್ಪ ! ' ಎಂದು ಪ್ರಾರ್ಥಿಸಿದನು. ಆಗ ದೇವರು ಅವನಿಗೆ ಪ್ರತ್ಯಕ್ಷವಾಗಿ—' ಛಿ, ಮೈಗಳ್ಳ ! ಹೆಗಲನ್ನು ಕೊಟ್ಟು ಗಾಲಿಯನ್ನು ಮೇಲಕ್ಕೆ ಎತ್ತಿಬಿಡು ' ಎಂದು ಹೇಳಿ ಹೊರಟುಹೋದರು."

" ಈ ಕಥೆಯಿಂದ ನಾವು ಏನು ಕಲಿಯತಕ್ಕದ್ದು ? "

ಎಷ್ಟೋ ಹುಡುಗರು ಕಥೆಯನ್ನೇ ತಿರುಗಿ ಹೇಳಲಿಕ್ಕೆ ಹತ್ತುತ್ತಾರೆ. ಆವಾಗ್ಗೆ " ನಾವು " ಈ ಶಬ್ದದ ಮೇಲೆ ಸ್ವಲ್ಪ ಆಘಾತ ಕೊಟ್ಟು ಕೆಳಗಿನಂತೆ ಅನ್ನಬೇಕು—

" ಇದರ ಮೇಲಿಂದ ನಾವು ಏನು ಕಲಿಯತಕ್ಕದ್ದು ? "

ಹುಡುಗನ ಉತ್ತರವು ಸ್ಪಷ್ಟವಿಲ್ಲದಿದ್ದರೆ ಮುಂದೆ ಕೆಳಗಿನಂತೆ ಅನ್ನಬೇಕು—

" ಏನು ಅಂದಿದ್ದಿ ಇನ್ನೊಮ್ಮೆ ಸ್ಪಷ್ಟಮಾಡಿ ಹೇಳು. ನೀನು ಹೇಳುವದು ನನಗೆ ಸರಿಯಾಗಿ ತಿಳಿದಿಲ್ಲ."

ಹುಡುಗನ ಉತ್ತರವನ್ನು ಅಕ್ಷರಶಃ ಬರೆದುಕೊಳ್ಳುವದು ಆದ ಮೇಲೆ ಮುಂದಿನ ಕಥೆಯ ಬಗ್ಗೆ ಕೇಳಬೇಕು.

"ಈಗ ಇನ್ನೊಂದು ಕಥೆ ಹೇಳುತ್ತೇನೆ. ಲಕ್ಷ್ಯಗೊಟ್ಟು ಕೇಳು. ಮತ್ತು ಅದರಿಂದ ನಾವು ಏನು ಕಲಿಯಬಹುದು, ಹೇಳು."

(ಬ) "ಗೊಲ್ಲತಿಯೂ ಮೊಸರ ಗಡಿಗೆಯೂ."

"ಒಬ್ಬ ಗೊಲ್ಲತಿಯು ತಲೆಯ ಮೇಲೆ ಮೊಸರ ಗಡಿಗೆಯನ್ನು ಹೊತ್ತುಕೊಂಡುಹೋಗುತ್ತಾ ಮನಸ್ಸಿನಲ್ಲಿ ಬಗೆಬಗೆಯ ಆಲೋಚನೆಗಳನ್ನು ಮಾಡಿದಳು—'ಈ ಗಡಿಗೆ ಮೊಸರನ್ನು ಮಾರಿ ಬರುವ ಹಣದಿಂದ ೧೦೦ ಕೋಳಿಯ ತತ್ತಿಗಳನ್ನು ಕೊಂಡುಕೊಳ್ಳಬಹುದು. ಈ ತತ್ತಿಗಳಿಂದ ಮುಕ್ಕಾಲು ನೂರು ಮರಿಗಳು ಉಳಿಯುವದಕ್ಕೇನೂ ಸಂಶಯವಿಲ್ಲ. ಯುಗಾದಿ ಹಬ್ಬದ ಹೊತ್ತಿಗೆ ಈ ಕೋಳಿಗಳನ್ನು ಮಾರಾಟಮಾಡಿ ಹೊಸ ಸೀರೆಯನ್ನು ಕೊಂಡುಕೊಳ್ಳುವೆನು. ಈ ಸೀರೆಯನ್ನು ಉಟ್ಟುಕೊಂಡು ಡೌಲಿನಿಂದ ನಾನು ಹೀಗೆ ನಡಿಯುವೆನು' ಎಂದು ಹಿಗ್ಗುತ್ತಾ ಮೈಮರೆತು ಸೀರೆಯನ್ನು ನೋಡಲಿಕ್ಕೆ ಗೋಣನ್ನು ಕೆಳಗೆ ಮಣಿಸಲು ಮೊಸರ ಗಡಿಗೆಯು ದೊಪ್ಪನೆ ಬಿದ್ದು ಚೂರುಚೂರಾಗಿ ಒಡೆದುಹೋಯಿತು. ಅವಳು ಮನಸ್ಸಿನಲ್ಲಿ ಮಾಡಿಕೊಂಡಂಥ ಮಂಡಿಗೆಗಳೆಲ್ಲ ನಿಮಿಷಮಾತ್ರದಲ್ಲೇ ವ್ಯರ್ಥವಾದವು."

(ಕ) "ನರಿಯೂ ಕಾಗೆಯೂ."

"ಒಂದಾನೊಂದು ಕಾಗೆಯು ಒಂದು ಮಾಂಸದ ಕರಣಿಯನ್ನು ಕೊಕ್ಕಿನಲ್ಲಿ ಹಿಡಿದುಕೊಂಡು ಒಂದು ಎತ್ತರವಾದ ಮರದ ಮೇಲಕ್ಕೆ ಹಾರಿಹೋಗಿ ಕುಳಿತಿರಲಾಗಿ ಒಂದು ನರಿಯು ಆ ಕಾಗೆಯ ಬಾಯಲ್ಲಿದ್ದ ಮಾಂಸದ ಕರಣಿಯನ್ನು ಅಪಹರಿಸಿ ತಿನ್ನಬೇಕೆಂದು ನಿಶ್ಚಯಿಸಿ—'ಎಲೇ, ಕಾಕರಾಜನೇ! ನಿನ್ನಂಥ ಸುರೂಪಿಯು ಲೋಕದಲ್ಲಿ ಇನ್ನಾರುಂಟು? ಇಂಥ ಮಹಾಸುಂದರ ಪಕ್ಷಿಯಾಗಿರುವ ನಿನ್ನ ಕಂಠದ ಸ್ವರವು ಇನ್ನೆಷ್ಟು ಮಧುರವಾಗಿದೆಯೋ ನಾನು ಊಹಿಸಲಾರೆನು. ನಿನ್ನ ಸುಸ್ವರವನ್ನು ನನಗೆ ಒಂದಿಷ್ಟು ಕೇಳಗೊಡವಿಯಾ' ಎಂದು ಹೇಳುತ್ತಾ ಕೆಳಗೆ ನಿಂತುಕೊಂಡಿತು. ನರಿಯು ಮಾಡಿದ ಹೊಗಳಿಕೆಯನ್ನು ಕಾಗೆಯು ಕೇಳಿ

ಆನಂದಪರವಶವಾಗಿ ಬಾಯಿ ತೆರೆದು 'ಕಾ ಕಾ' ಎಂದು ಕೂಗಿತು. ಕೂಡಲೆ ಮಾಂಸದ ಕರಣಿಯು ದೊಪ್ಪನೆ ಕೆಳಕ್ಕೆ ಬೀಳಲು, ನರಿಯು ಅದನ್ನು ಕಚ್ಚಿಕೊಂಡು ಹೊರಟುಹೋಯಿತು."

(ಡ) "ಒಕ್ಕಲಿಗನೂ ಹಂಸಪಕ್ಷಿಯೂ."

"ಒಬ್ಬ ಒಕ್ಕಲಿಗನು ತನ್ನ ಹೊಲದಲ್ಲಿ ಬಿತ್ತಿದ ಕಾಳುಗಳನ್ನು ಆರಿಸಿ ಕೊಂಡು ತಿನ್ನುವ ಕಬ್ಬಕ್ಕಿಗಳನ್ನು ಹಿಡಿಯಲೋಸುಗ ಒಂದು ಜಾಳಿ ಗೆಯ ಬಲೆಯನ್ನು ಹಾಕಿದನು. ಆ ಬಲೆಯಲ್ಲಿ ಕಬ್ಬಕ್ಕಿಗಳೊಡನೆ ಒಂದು ಹಂಸವೂ ಸಿಕ್ಕಿಬಿದ್ದಿತು. ಆಗ ಆ ಹಂಸಪಕ್ಷಿಯು ಆ ಒಕ್ಕಲಿಗನನ್ನು ಕುರಿತು—'ಅಯ್ಯಾ, ನನ್ನನ್ನು ಕ್ಷಮಿಸಿ ಬಿಟ್ಟುಬಿಡು; ನಾನು ನಿನ್ನ ಹೊಲದ ಕಾಳುಗಳನ್ನು ತಿಂದವನಲ್ಲ; ನಾನು ಕಾಳುಗಳನ್ನು ತಿನ್ನುವ ವನೂ ಅಲ್ಲ; ವಿನೋದಕ್ಕಾಗಿ ಹಾರಾಡುತ್ತ ಇಲ್ಲಿ ಈ ಪಕ್ಷಿಗಳಿರುವಲ್ಲಿ ಇಳಿದೆನು' ಎಂದು ನುಡಿಯಿತು. ಆಗ ಒಕ್ಕಲಿಗನು—'ನೀನು ಈ ಬಲೆ ಯಲ್ಲಿ ಸಿಕ್ಕಿಬಿದ್ದದ್ದು ಕಾಳುಗಳನ್ನು ತಿನ್ನುವ ಈ ತುಡುಗ ಕಬ್ಬಕ್ಕಿಗಳ ಸಂಗಡವೇ ಅಲ್ಲವೇ? ಆದ್ದರಿಂದ ನೀನೂ ಅವುಗಳ ಕೂಡ ಸಾಯಲಿಕ್ಕೇ ಬೇಕು' ಎಂದನು."

(ಈ) "ಮುದುಕನೂ ಅವನ ಮಗನೂ ಕುದುರೆಯೂ."

"ಒಂದಾನೊಂದು ದಿವಸ ಒಬ್ಬ ಮುದುಕನು ತನ್ನ ಚಿಕ್ಕ ಮಗ ನನ್ನು ಸಂಗಡ ಕರೆದುಕೊಂಡು ಒಂದು ಕುದುರೆಯನ್ನು ಮಾರುವ ದಕ್ಕೆ ನೆರೆಯೂರಿಗೆ ಹೊಡೆದುಕೊಂಡು ಹೋಗುತ್ತಿರಲಾಗಿ, ದಾರಿಕಾರರಲ್ಲಿ ಒಬ್ಬನು ಅವರನ್ನು ನೋಡಿ—'ಈ ಮುದುಕನು ಹುಚ್ಚನೋ ಏನೋ? ಕುದುರೆ ಇದ್ದು ಇವನು ಮಗನೊಡನೆ ಸುಮ್ಮನೆ ನಡಿಯುತ್ತ ಹೋಗು ತ್ತಾನೆ' ಎಂದು ಹಾಸ್ಯಮಾಡಿದನು. ಮುದುಕನು ಆ ಮಾತನ್ನು ಕೇಳಿ, ಮಗನನ್ನು ಕುದುರೆಯ ಮೇಲೆ ಹತ್ತಿಸಿ, ತಾನು ಹಿಂಬಾಲಿಸಿ ಹೋಗು ತ್ತಿದ್ದನು. ಅಷ್ಟರಲ್ಲಿ ಬೇರೊಬ್ಬ ದಾರಿಕಾರನು ಅವರನ್ನು ನೋಡಿ— 'ಎಲೋ ಹುಡುಗನೇ! ಇದೇನು ಅನ್ಯಾಯ. ಮುಪ್ಪಿನ ಮುದುಕನಾದ ತಂದೆಯನ್ನು ನಡೆಸಿ ನೀನು ಕುದುರೆಯನ್ನು ಹತ್ತಿಕೊಂಡುಹೋಗುವದು ನ್ಯಾಯವೇ' ಎಂದು ಗದರಿಸಿದನು. ಮುದುಕನು ಆ ಮಾತು ಕೇಳಿ ಮಗನನ್ನು ಇಳಿಸಿ, ತಾನು ಕುದುರೆಯ ಮೇಲೆ ಕೂತುಕೊಂಡನು.

ತರುವಾಯ ಮತ್ತೊಬ್ಬ ಪಾಂಥಸ್ಥನು ಅವರಿಗೆ ಎದುರಾಗಿ—'ಅಹಾಹಾ! ಈ ಸಣ್ಣ ಹುಡುಗನು ಕಾಲು ಸೋಲುವಂತೆ ನಡಿಯುತ್ತ ಹೋಗುತ್ತಾನೆ; ಮುದುಕನು ಮಗನ ಮೇಲೆ ಸ್ವಲ್ಪವಾದರೂ ಕನಿಕರವಿಲ್ಲದೆ ನಡಗರದಿಂದ ಕುದುರೆಯನ್ನು ಹತ್ತಿಕೊಂಡುಹೋಗುತ್ತಾನೆ, ನೋಡಿದಿರಾ?' ಎಂದು ಜತೆಯುವರೊಡನೆ ಗಟ್ಟಿಸಿ ಮಾತಾಡಿದನು. ಮುದುಕನು ಈ ಮಾತು ಕೇಳಿ, ಮಗನನ್ನು ಕೂಡ ತನ್ನ ಹಿಂದೆ ಕುದುರೆಯ ಮೇಲೆ ಹತ್ತಿಸಿಕೊಂಡು ನಡೆದನು. ಹೀಗಿರಲಾಗಿ, ಬೇರೊಬ್ಬ ದಾರಿಕಾರನು ಮುದುಕನನ್ನು ನೋಡಿ—'ಈ ಕುದುರೆಯು ನಿಮ್ಮದೋ ಹೆರವರದೋ? ನಿಮ್ಮಿಬ್ಬರ ಭಾರವನ್ನು ಈ ಬಡ ಕುದುರೆಯ ಮೇಲೆ ಹೇರಿದ್ದೀರಿ. ಇದರ ನಡು ಮುರಿದೀತೆಂಬ ಎಚ್ಚರಿಕೆಯಿಲ್ಲವೇ? ನೀವಿಬ್ಬರೂ ಇದನ್ನು ಹತ್ತಿಕೊಂಡುಹೋಗುವುದಕ್ಕಿಂತ ನೀವೇ ಇದನ್ನು ಸಹಜವಾಗಿ ಹೊತ್ತುಕೊಂಡುಹೋಗಬಹುದಲ್ಲವೇ?' ಎಂದು ಹೀಯಾಳಿಸಿದನು. ಇದನ್ನು ಕೇಳಿ ಮುದುಕನು ವ್ಯಸನಪಟ್ಟು ತಾನೂ ಮಗನೂ ಇಳಿದು ಕುದುರೆಯ ನಾಲ್ಕೂ ಕಾಲುಗಳನ್ನು ಜೋಡಿಸಿ ಕಟ್ಟಿ, ನಡುವೆ ಒಂದು ಕೋಲು ಹಾಕಿ, ಇಬ್ಬರೂ ಅದನ್ನು ಹೆಗಲ ಮೇಲೆ ಹೊತ್ತುಕೊಂಡು ನಡೆದರು. ಸ್ವಲ್ಪ ಮುಂದಕ್ಕೆ ಹೊಳೆಯ ಸೇತುವೆಯ ಮೇಲಿಂದ ಹೋಗುತ್ತಿರುವಾಗ, ಕುದುರೆಯು ಬೆದರಿ ಕಾಲುಗಳನ್ನು ಚಟಪಟ ಝಾಡಿಸಿದ್ದರಿಂದ ಕೋಲು ಮುರಿದು ಕುದುರೆಯು ಹೊಳೆಯಲ್ಲಿ ಬಿದ್ದು ಸತ್ತುಹೋಯಿತು."

ಸರಿಯಿದ್ದ ಉತ್ತರಕ್ಕೆ, ಅಂದರೆ ಕಥೆಯ ಸರಿಯಾದ ಬೋಧವನ್ನು ಸಾಮಾನ್ಯ ಶಬ್ದಗಳಲ್ಲಿ ಕೊಟ್ಟರೆ, ೨ ಗುಣಗಳು. ಉತ್ತರವು ಸಾಧಾರಣವಾಗಿ ಸರಿಯಿದ್ದರೆ ಆದರೆ ಎಲ್ಲ ರೀತಿಯಿಂದಲೂ ಸಮವಾಗಿ ಇಲ್ಲದಿದ್ದರೆ ಇದರ ಅರ್ಧ ಅಂದರೆ ೧ ಗುಣ ಕೊಡಬೇಕು. ಟರ್ಮನ್ನನ ಮತದ ಪ್ರಕಾರ ಈ ಎರಡನೇ ಪ್ರಕಾರದ ಉತ್ತರಗಳು ಎರಡು ತರದವು ಇರುತ್ತವೆ—(೧) ನೀತಿಸಾರವು ಸಾಮಾನ್ಯ ಶಬ್ದಗಳಲ್ಲಿ ಕೊಟ್ಟಿರುತ್ತದೆ ಮತ್ತು ಸ್ವಲ್ಪಮಟ್ಟಿಗೆ ಸರಿ ಇರುತ್ತದೆ; ಆದರೆ ಎಲ್ಲ ರೀತಿಯಿಂದಲೂ ತೀರ ಸರಿ ಇರುವದಿಲ್ಲ ಮತ್ತು (೨) ನೀತಿಸಾರವು ತೀರ ಸರಿ ಇರುತ್ತದೆ. ಆದರೆ ಸಾಮಾನ್ಯ ಶಬ್ದಗಳಲ್ಲಿ ಕೊಟ್ಟಿರುವದಿಲ್ಲ.

ಮೊದಲನೇ ಪ್ರಕಾರದ ಉದಾಹರಣೆ—"ಸಂಕಟ ಸಮಯದಲ್ಲಿ ದೇವರ

ಧ್ಯಾನವನ್ನು ಮಾಡಬೇಕು, ಅಂದರೆ ಅವನು ನಮಗೆ ಯುಕ್ತಿಯನ್ನು ಸೂಚಿಸಿಕೊಡುತ್ತಾನೆ.'' ಎರಡನೇ ಪ್ರಕಾರದ ಉದಾಹರಣೆ—"ಅವನು ದೇವರ ಧ್ಯಾನವನ್ನು ಮಾಡುತ್ತಾ ಸುಮ್ಮನೆ ಕೂತುಕೊಳ್ಳದೆ ಸ್ವತಃ ಪ್ರಯತ್ನವನ್ನು ಮಾಡಬೇಕಾಗಿತ್ತು.''

ಹುಡುಗರ ಉತ್ತರಗಳು—

ನಮ

(ಅ) ನಾವು ಮೈಗಳ್ಳರಾಗಬಾರದು—ಸುಮ್ಮನೆ ದೇವರಿಗೆ ಎಂದೂ ಬೇಡಿಕೊಳ್ಳಬಾರದು ; ನಾವು ಬೇರೆಯವರ ಮೇಲೆ ಭಾರಹಾಕದೆ ಆದಷ್ಟು ನಾವು ನಮ್ಮಷ್ಟಕ್ಕೆ ಸಹಾಯಮಾಡಬೇಕು ; ಯಾವಾಗಲೂ ಮೊದಲು ಪ್ರಯತ್ನಮಾಡಿ ಆಗದಿದ್ದರೆ ದೇವರಿಗೆ ಬೇಡಿಕೊಳ್ಳಬೇಕು ; ನಮಗೆ ಏನಾದರೂ ಕಷ್ಟ ಬಂದರೆ ಧೈರ್ಯದಿಂದ ಮಾಡಬೇಕು—ದೇವರು ಮಾಡುತ್ತಾನೆ ಎಂದು ಸುಮ್ಮನೆ ಕೂಡ್ರಬಾರದು ; ನೀವು ಪ್ರಯತ್ನಮಾಡಿ ದೇವರಿಗೆ ಬೇಡಿಕೊಳ್ಳಬೇಕು—ಸುಮ್ಮನೆ ಕೂತು ಬೇಡಿಕೊಂಡರೆ ಕೆಲಸ ಆಗುವದಿಲ್ಲ ; ಪ್ರಯತ್ನಮಾಡತಕ್ಕದ್ದು ಸುಮ್ಮನೆ ಕೂಡ್ರಬಾರದು ; ಆಲಸ್ಯ ಇರಬಾರದು.

(ಬ) ನಾವು ಏನಾದರೂ ವಿಚಾರಮಾಡದೆ ಮನಸ್ಸಿನೊಳಗೆ ಮಾಡಿಕೊಂಡರೆ ತಪ್ಪಿಹೋಗುತ್ತದೆ—ಮುಂದೆ ಏನು ಆಗುತ್ತದೆ ಹೇಳಲಿಕ್ಕೆ ಬರುವದಿಲ್ಲ ; ಮುಂದಿನ ಆಲೋಚನೆಯನ್ನು ಸುಳ್ಳಸುಳ್ಳೇ ಮಾಡಬಾರದು ; ಮೊದಲಿಗಾಗಿ ವಿಚಾರವನ್ನು ಹಾಕಬಾರದು ; ಮುಂದೆ ಆಗುವದು ಈಗೇ ವಿಚಾರಮಾಡಬಾರದು ; ಈಗಿರುತ್ತಲೆ ಮುಂದಿನ ವಿಚಾರವನ್ನು ಯೋಚಿಸಬಾರದು.

(ಕ) ಯಾರಾದರೂ ನಮ್ಮನ್ನು ಹೊಗಳಿದರೆ ಅದಕ್ಕೆ ಮೋಸಹೋಗಬಾರದು ; ನಾವು ಮುಖಸ್ತುತಿ ಮಾಡುವವರ ಮಾತನ್ನು ಎಂದೂ ಕೇಳಬಾರದು ; ನಾವು ಮಂದಿಯ ಮಾತಿಗೆ ಮರುಳಾಗಬಾರದು—ನಮ್ಮ ಹಿತ ನಾವು ನೋಡಿಕೋತ ಇರಬೇಕು ; ಎರಡನೇಯವರ ಮಾತಿಗೆ ನಾವು ಮರುಳಾಗಬಾರದು ; ಬರೇ ಮುಖಸ್ತುತಿಗೆ ನಾವು ಆಶ್ರಯಕೊಡದೆ ಸಾರಾಸಾರ ವಿಚಾರಮಾಡಿ ಕೆಲಸಮಾಡಬೇಕು ; ಸ್ತುತಿಗಳಿಗೆ ಮೋಹ

ವಾಗಬಾರದು ; ಮುಂದಿ ಮಾತು ಕೇಳಬಾರದು—ಅವರು ಹೊಗಳಿಕೊಂಡರೆ ಅವರ ಹಾಗೆ ಹೋಗಬಾರದು ; ಎರಡನೆಯವರು ತಮ್ಮ ಸ್ವಂತ ಹಿತಕ್ಕೆ ಎಷ್ಟಾದರೂ ಹೊಗಳಿದರೂ ನಾವು ಅದಕ್ಕೆ ಮೋಸಹೋಗಬಾರದು ; ಎರಡನೇಯವರು ನಮಗೆ ಸ್ತುತಿಸಿದರೆ ಅವರ ಹಾಗೆ ನಾವು ನಡಿಯುಬಾರದು.

(ಡ) ಕೆಟ್ಟ ಜನರ ಸಂಗತಿ ಹಿಡಿದರೆ ಅವರಿಗೆ ಏನು ಶಿಕ್ಷೆ ಆಗುತ್ತದೆ ಅದನ್ನು ನಾವೂ ಉಪಭೋಗಿಸಬೇಕಾಗುತ್ತದೆ ; ನಾವು ಕೆಟ್ಟ ಸಂಗತಿಯನ್ನು ಹಿಡಿದರೆ ಅದರ ಫಲವನ್ನು ನಾವು ಉಪಭೋಗಿಸಬೇಕಾಗುತ್ತದೆ ; ಕೆಟ್ಟವರ ಸಂಗತಿ ಹಿಡಿದರೆ ನಮಗೂ ಅದೇ ಫಲ ಸಿಗುತ್ತದೆ ; ಸಂಗತಿಯ ಫಲ—ಕೆಟ್ಟ ಸಂಗತಿ ಇದ್ದರೆ ಚಲೋಯವನಿದ್ದರೂ ಕೆಟ್ಟ ಎಂತ ಭಾವನಾ ಆಗುತ್ತದೆ ; ದುರ್ಜನರ ಸಹವಾಸವನ್ನು ಮಾಡಬಾರದು ; ತಾವು ಸ್ವಂತ ವಿಚಾರಮಾಡದೇ ಜನರ ಮಾತು ಕೇಳಬಾರದು.

(ಈ) ನಾವು ಪ್ರತಿಯೊಬ್ಬರನ್ನು ಸಂತೋಷಪಡಿಸಲಿಕ್ಕೆ ಪ್ರಯತ್ನ ಮಾಡಿದರೆ ಅದು ನಿಷ್ಫಲವಾಗುತ್ತದೆ ; ನಾವು ಯಾವುದಾದರೂ ಕೆಲಸವನ್ನು ನಮಗೆ ಹಿತವಾಗುವಂತೆ, ಪರರಿಗೆ ಕೇಡಾಗದಂತೆ ಮಾಡಬೇಕು—ಎಲ್ಲವರಿಗೆ ಒಮ್ಮೆಗೆಲೇ ಸಂತೋಷಪಡಿಸುವದು ಅಶಕ್ಯವು ; ಎಲ್ಲರನ್ನೂ ಆನಂದಪಡಿಸುವದು ಆಗುವದಿಲ್ಲ—ಅದಕ್ಕೆ ತನಗೆ ತಿಳಿದದ್ದನ್ನು ಮಾಡಬೇಕು.

ಅರ್ಥಸಮ

(ಅ) ಬಂಡಿ ಕೆಸರೊಳಗೆ ಸಿಕ್ಕಕೂಡಲೆ ಗಾಲಿ ಎತ್ತಬೇಕಾಗಿತ್ತು—ದೇವರ ಪ್ರಾರ್ಥನೆ ಮಾಡಬಾರದು ; ನಮ್ಮ ಕೈಲೆ ಆಗುತ್ತಿದ್ದರೆ ಅದನ್ನು ಮಾಡಬೇಕು, ಸಣ್ಣವರಿದ್ದಾಗ ಮಾಡಲಿಕ್ಕೆ ಕಲಿಯಬೇಕು ; ನಮ್ಮ ಸಂಕಟವನ್ನು ಹ್ಯಾಗಾದರೂ ಮಾಡಿ ಪಾರಮಾಡಿಕೊಳ್ಳಬೇಕು.

(ಬ) ನಾವು ಮನಸ್ಸಿನೊಳಗೆ ಏನೂ ಆಶಿಸಬಾರದು ; ಸುಮ್ಮನೆ ನಾವು ನಮ್ಮ ಮನಸ್ಸಿನೊಳಗೆ ಎರಡನೇ ವಿಚಾರವನ್ನು ತರಬಾರದು—ತಮಗೆ ಯೋಗ್ಯವಾದದ್ದನ್ನು ಬಿಟ್ಟು ; ಅತಿ ಆಶಾ ಗತಿಗೆಡಿಸಿತು—ಎಚ್ಚರಿಕೆಯಿಂದ ಕೆಲಸಮಾಡಬೇಕು ; ಮನಸ್ಸಿನೊಳಗೆ ಮುಂಡಿಗೆ ಮಾಡ

ಬಾರದು—ಮನಸ್ಸಿನೊಳಗೆ ಮಂಡಿಗೆ ಮಾಡಿದರೆ ಗೋಧಿ ರೊಕ್ಕ ಕೊಡು ವವರು ಯಾರು; ಅತಿ ಆಶೆ ಮಾಡಬಾರದು; ಮನಸ್ಸಿನಲ್ಲಿ ಸುಮ್ಮನೆ ವಿಚಾರಮಾಡಬಾರದು—ಕೈಲೆ ಆದಷ್ಟು ಕೆಲಸಮಾಡಬೇಕು; ನಾವು ಏನು ಮಾಡಹತ್ತಿದರೆ ಮೊದಲೇ ವಿಚಾರಮಾಡಬಾರದು; ಏನಾದರೂ ಕೆಲಸ ಮಾಡಬೇಕಾದರೆ ಮೊದಲೇ ವಿಚಾರಮಾಡಬಾರದು.

(ಕ) ಠಕ್ಕ ಪ್ರಾಣಿಗಳ ಎಂಥೂ ವಿಶ್ವಾಸವನ್ನು ಇಡಬಾರದು; ಒಬ್ಬರ ಮಾತು ಕೇಳಬಾರದು; ಎರಡನೇಯವರು ಛಲೋದೂ ಹೇಳುತ್ತಾರೆ ಕೆಟ್ಟದೂ ಹೇಳುತ್ತಾರೆ ಅದನ್ನು ವಿಚಾರಮಾಡಿ ಉತ್ತರ ಕೊಡಬೇಕು; ಎರಡನೇದವರು ಹೇಳಿದ್ದು ಕೇಳಬಾರದು—ತಮಗೆ ಹ್ಯಾಗೆ ಯೋಗ್ಯತಾ ಅದೆ ಹಾಗೆ ಮಾಡಬೇಕು; ತಮ್ಮದು ಡೌಲು ತೋರಿಸಲಿಕ್ಕೆ ಹೋದರೆ ನಮಗೆ ಕೆಡಕಾಗುತ್ತದೆ ಎಂದು ತಿಳಕೊಳ್ಳಬೇಕು; ಪರರ ವಸ್ತುವನ್ನು ಆಶಿಸಬಾರದು—ಎರಡನೇಯವರ ಮಾತನ್ನು ಕೇಳಬಾರದು—ಅವರು ಯಾವಾಗಲೂ ನಮಗೆ ಕೇಡು ಬಯಿಸುತ್ತಾರೆ; ಅದು ನಮ್ಮನ್ನು ಉಬ್ಬಿಸಿ ನಮ್ಮ ಕೈಯೊಳಗೆ ಇದ್ದದ್ದು ಸಾಮಾನು ತಕ್ಕೊಂಡು ಹೋಯಿತು.

(ಡ) ಎರಡನೇಯವರ ಜೊತೆಗೆ ನಾವು ಹೋಗಬಾರದು; ಎರಡನೇ ಯವರ ಕೂಡ ಹೋಗಬಾರದು; ನಾವು ಇರುವ ಜಾಗಾ ಬಿಟ್ಟು ಬೇರೆ ಕಡೆಗೆ ಬೇರೆಯವರ ಜೊತೆಗೆ ಹೋದರೆ ಕೆಡಕಾಗುತ್ತದೆ.

(ಈ) ಎರಡನೇದವರು ನಾವು ಮಾಡಿದ್ದಕ್ಕೆ ನಕ್ಕರೆ ಅದನ್ನು ಮನಸ್ಸಿಗೆ ತರಬಾರದು; ಯಾವದಾದರೂ ಒಂದು ಹಾದಿ ಹಿಡಿಯಬೇಕು—ಎಲ್ಲ ತರದ ಹಾದಿಯಿಂದ ಹೋಗಬಾರದು; ಒಬ್ಬರ ಮಾತು ಕೇಳಬಾರದು; ಮಂದಿ ಹೇಳಿದ್ದು ಕೇಳಬಾರದು.

## ತಪ್ಪು

(ಅ) ನಮಗೆ ಯಾವದಾದರೂ ಆಪತ್ತು ಬಂದರೆ ದೇವರಿಗೆ ಪ್ರಾರ್ಥನೆ ಮಾಡಬೇಕು; ಅವನು ಸೋಮಾರಿಯಾಗಿದ್ದನು; ದೇವರನ್ನು ನೆನಿಸ ಬೇಕು; ದೇವರು ನಮಗೆ ಬುದ್ಧಿಮಾತು ಹೇಳುತ್ತಾನೆ; ಯಾವದರ ಮೇಲೆ ಆದರೂ ವಿಶ್ವಾಸ ಇರಬೇಕು—ದೇವರ ಮೇಲೆ; ಹೆಗಲು ಕೊಟ್ಟು ನೂಕಿಸಿದರೆ ಗಾಲಿ ಹೊರಗೆ ಬರುತ್ತಿತ್ತು; ದೇವರನ್ನು ಪ್ರಾರ್ಥಿಸಿದರೆ ಅವನು ಎಲ್ಲಿ ಮಾಡುತ್ತಾನೆ.

(ಬ) ಮನಸ್ಸಿನೊಳಗೆ ನಾವು ಯಾವದಾದರೂ ವಿಚಾರಮಾಡಬಾರದು; ಯಾವಾಗಲೂ ಮುಂದಿನ ಕಾಲದ ವಸ್ತುಗಳು ನಮ್ಮ ಅಭ್ಯುದಯ ಕಾಲಕ್ಕೆ ಕಾರಣವಾಗುವದಿಲ್ಲ; ಮನಸ್ಸಿನೊಳಗೆ ಇಟ್ಟು ಕೊಂಡರೆ ಕೆಟ್ಟು ಹೋಗುತ್ತದೆ; ಮಾಡುವದಿದ್ದರೆ ಮನಸ್ಸಿನಲ್ಲಿ ಮಾಡಿಕೊಳ್ಳಬೇಕು—ಆಗುತ್ತಿದ್ದರೆ ಮಾಡಬೇಕು.

(ಕ) ನಾವು ಎರಡನೇಯವರಿಗೆ ಹ್ಯಾಗೆ ಮಾಡುತ್ತೇವೆ ಹಾಗೆ ನಮಗೆ ಆಗುತ್ತದೆ; ನಾವು ವಿಚಾರಮಾಡದೇ ಅದಕ್ಕೆ ಏನೂ ಹೇಳಬಾರದು; ನರಿಯ ಜಾಣತನ—ಕಾಗೆಯು ಎರಡನೇಯವರ ಮಾತು ಕೇಳಿ ತನ್ನ ಮಾಂಸದ ತುಂಡು ಕಳಕೊಂಡಿತು; ಯಾರಿಗಾದರೂ ಅಪಹರಿಸಿ ಮಾಡಬಾರದು; ಕಾವಕಾವ ಮಾಡಬಾರದಿತ್ತು; ಬಹಳ ಅತ್ಯಾಶೆ ಮಾಡಬಾರದು; ಏನಾದರೂ ತಿನ್ನುವ ಮುಂದೆ ಒದರಬಾರದು; ತಿನ್ನುವದು ಬಿಡಿಸಬಾರದು—ಅವರಾಗಿ ಕೊಟ್ಟರೆ ತಕ್ಕೊಳ್ಳಬೇಕು.

(ಡ) ನಾವು ಒಂದು ಕೆಲಸ ನೋಡದೆ ಎಂದೂ ಮಾಡಬಾರದು; ಅನ್ಯಾಯದಿಂದ ಎರಡನೇಯವರನ್ನು ಕೊಲ್ಲಬಾರದು; ಆ ಹಂಸಪಕ್ಷಿಗೆ ಸುಳ್ಳು ಹೇಳಿದ ಹಾಗೆ ಆಯಿತು; ವಿಚಾರಮಾಡಿ ಮಾಡಬೇಕು; ಆ ಹಂಸಪಕ್ಷಿಯ ಜಾಣತನ; ಅವನು ದಯಾ ತೋರಿಸಲಿಲ್ಲ; ಯಾರಾದರ ಮನೆಯ ಹತ್ತರ ಹೋಗಬಾರದು; ಸುಳ್ಳಸುಳ್ಳೇ ಬಲೆಯೊಳಗೆ ಹಿಡಿದನು; ಅದು ಏನೂ ಮಾಡಿಲ್ಲ ಅದು ಸಿಕ್ಕಿತು; ಕಾಳು ತಿನ್ನಬಾರದಿತ್ತು; ನಾವು ತುಡುಗ ಬಿಡುಗ ಮಾಡಬಾರದು; ಒಂದು ಎರಡು ಸರತಿ ಹೇಳಬೇಕು—ಕೊಲ್ಲಬಾರದು.

(ಈ) ಪರರಿಗೆ ಕೇಡಾಗದಂತೆ, ನಮಗೆ ಕೇಡಾಗದಂತೆ ಮಾರ್ಗವನ್ನು ಹಿಡಿಯಬೇಕು; ಪ್ರಾಣಿಗಳನ್ನು ಕೆಟ್ಟರೀತಿಯಿಂದ ನಡಿಸಬಾರದು.

**ಪ್ರಶ್ನೆ ೬.**—ಚಿತ್ರಗಳ ಅರ್ಥವನ್ನು ಹೇಳುವದು (೪ರಲ್ಲಿ ೩. ಪ್ರತಿಯೊಂದಕ್ಕೆ ವೇಳೆಯ ಅವಧಿ ೨ ಮಿನೀಟು).

(ಈ ವರ್ಷದ ಪ್ರಶ್ನೆಗಳು ವರ್ಷ ೬, ಪ್ರಶ್ನೆ ೫ರಂತೆಯೇ ಇರುತ್ತವೆ.)

ಚಿತ್ರಗಳನ್ನು ಕೆಳಗಿನ ಕ್ರಮದಲ್ಲಿ ತೋರಿಸಬೇಕು—

(೧) ರೇಲ್ವೇ ಸ್ಟೇಷನ್, (೨) ಮನೆಗೆ ಬಂದವರ ಸತ್ಕಾರ, (೩) ಮೋಟರಿನ ಅಪಘಾತ, (೪) ಮನೆಯ ಒಳಗಿನ ದೃಶ್ಯ.

ಹುಡುಗನಿಗೆ ಅಥವಾ ಹುಡುಗಿಗೆ ಕೆಳಗಿನಂತೆ ಕೇಳಬೇಕು—

"ಈ ಚಿತ್ರವು ಯಾತರದು, ಹೇಳು. ಇದು ಯಾವ ವಿಷಯದು?"

ವರ್ಷ ೬, ಪ್ರಶ್ನೆ ೫ರಲ್ಲಿ ಕೇಳಿದ ಪ್ರಶ್ನೆಗಳೇ ಈ ವರ್ಷದ ಹುಡುಗರ ಕಡೆಯಿಂದ ಚಿತ್ರದ ಉಚಿತವಾದ ಅರ್ಥವನ್ನು ಹೊರಡಿಸುತ್ತವೆ. ಆದರೆ ಕೆಲವು ಚಿತ್ರಗಳ ವಿಷಯಕ್ಕೆ ಹುಡುಗರ ಉತ್ತರಗಳು ಸಂದಿಗ್ಧವಾಗಿದ್ದರೆ, ಆಯಾ ಚಿತ್ರಗಳನ್ನು ತಿರುಗಿ ತಕ್ಕೊಂಡು ಕೆಳಗಿನಂತೆ ಕೇಳಬೇಕು—

"ಈ ಚಿತ್ರದ ಅರ್ಥವೇನು, ಹೇಳು."

ಹುಡುಗನು ಅನ್ನುವದು ನೆಟ್ಟಗೆ ತಿಳಿಯದಿದ್ದರೆ ಮತ್ತೆ ಮುಂದಿನಂತೆ ಕೇಳಬಹುದು—

"ನೀನು ಏನು ಅನ್ನುತ್ತೀ, ನೆಟ್ಟಗೆ ವಿವರಮಾಡಿ ಹೇಳು."

ಹುಡುಗರ ಉತ್ತರಗಳು—

ಸಮ

(ಅ) (೧) ರೇಲ್ವೆ ಸ್ಟೇಷನದಿಂದ ಇವರು ಇಬ್ಬರೂ ಬಂದಾರೆ, ಸಾಮಾನ ಇಟ್ಟಾರೆ. ಇಲ್ಲಿ ಇಬ್ಬರದೂ ಭೆಟ್ಟಿಯಾಗಿದೆ. (೨) ರೇಲ್ವೇ ಗಾಡಿ ಬಂದು ಹೋಗಿದೆ. ಪೆಸೆಂಜರರು ಇಳಿದಾರೆ. ಸ್ಟೇಷನಮಾಸ್ತರನು ನೀವು ಎಲ್ಲಿಗೆ ಹೋಗುವವರು ಒಳಗೆ ಬರ್ರಿ ಅನ್ನುತ್ತಾನೆ. (೩) ಊರಿಗೆ ಹೋಗಬೇಕೆನ್ನುತ್ತಾರೆ. ಸ್ಟೇಷನ ಮೇಲೆ ನಿಂತು ಹವಾಲನ್ನು ಕೇಳುತ್ತಾರೆ. (೪) ಪ್ಲೆಟಫಾರ್ಮಿನೊಳಗೆ ಸಾಮಾನು ತಕ್ಕೊಂಡು ಮಳೆ ಬರುವದೆಂದು ಟಾಂಗಾದ ಸಲುವಾಗಿ ಕೇಳುತ್ತ ನಿಂತಿರುವರು. (೫) ರೇಲ್ವೇ ಸ್ಟೇಷನ ಅದೆ. ಇವರು ಊರಿಂದ ಬಂದಾರೆ. ಮಳೆ ಬರಲಿಕ್ಕೆ ಹತ್ತಿದೆ. ಅವರ ಪೈಕಿ ಯಾರೋ ಒಬ್ಬನು ಮಾತಾಡಿಸುತ್ತಾನೆ. (೬) ಊರಿಗೆ ಹೋಗಿದ್ದನು. ಅಕಸ್ಮಾತ್ತಾಗಿ ಗೆಳೆಯನನ್ನು ನೋಡಿ ಮಾತಾಡಿಸುತ್ತಾನೆ. ಸ್ಟೇಷನ. (೭) ರೇಲ್ವೇ ಸ್ಟೇಷನ. ಒಬ್ಬ ಮನುಷ್ಯ ಊರಿಂದ ಬಂದಾನೆ. ಬಹಳ ಸಾಮಾನ ತಕ್ಕೊಂಡು ಬಂದಾನೆ. ಅದರ ತೂಕ ಜಾಸ್ತಿ ಇದ್ದದ್ದರಿಂದ ಸ್ಟೇಷನ ಮಾಸ್ತರನು ಕೇಳಲಿಕ್ಕೆ ಬಂದಾನೆ. (೮) ಒಬ್ಬ ಸಾವಕಾರ ಊರಿಂದ ಹೆಂಡತಿಯನ್ನು ಕರಕೊಂಡು ಸಾಮಾನ ಇಟ್ಟುಕೊಂಡು ನಿಂತಾನೆ. ಆವಾಗ್ಗೆ ಒಬ್ಬ ಗೆಳೆಯ ಭೆಟ್ಟಿಯಾಗ್ಯಾನೆ.

(ಬ) (೧) ಈಕೆ ಮನೆಯೊಳಗೆ ಇದ್ದಾಳೆ. ಈಕೆ ಭೆಟ್ಟಿಗೆ ಬರುವದಾಗಿದೆ.

(೨) ಇವರ ಮನೆಯೊಳಗೆ ಯಾರೋ ಜಡ್ಡು ಆಗ್ಯಾರೆ. ಲೇಡೀ ಡಾಕ್ಟರರು ಬಂದಾರೆ. (೩) ಈ ಹೆಂಗಸು ಊರಿಂದ ಬಂದಾಳೆ. ಇವಳು ಬಳ್ಳೇ ಆಶ್ಚರ್ಯ ಆಗಿ ನಿಂತುಕೊಂಡಾಳೆ. (೪) ತಮ್ಮ ಆಪ್ತರು ಬಂದಿರುವದರಿಂದ ಮನೆಯವರು ಆಲಿಂಗನ ಕೊಡುತ್ತಿರುವರು. (೫) ಒಬ್ಬ ಹೆಣ್ಣುಮಗಳು ಒಳಗೆ ಬರುತ್ತಾಳೆ. ಬಂಧುರುಪಲೆ ಸನ್ಮಾನಕೊಡಬೇಕೆಂತ ಈ ಹೆಣ್ಮಗಳು ಎದ್ದು ನಿಂತಿರುತ್ತಾಳೆ. (೬) ಯಾವಳೋ ಒಬ್ಬ ಹೆಂಗಸು ತನ್ನ ಪ್ರೀತಿಯ ಗೆಳತಿಯ ಮನೆಗೆ ಹೋಗುತ್ತಿದ್ದಳು. (೭) ಯಾವದೋ ಒಂದು ಹೆಂಗಸು ಪಿಯಾನೋ ಪೆಟ್ಟಿಗೆ ಬಾರಿಸಿಕೋತ ಕೂತಾಗ ಡಾಕ್ಟರಣಿ ಕೈಯೊಳಗೆ ಪೆಟ್ಟಿಗೆ ಹಿಡಕೊಂಡು ಬಂದಾಳೆ. (೮) ಒಬ್ಬಾಕೆ ಗೆಳತಿ ಆಕೆಗೆ ಸಾಲೆ ಕರೆಯಲಿಕ್ಕೆ ಬಂದಾಳೆ. (೯) ಈಕೆಯನ್ನು ನೋಡಲಿಕ್ಕೆ ಒಬ್ಬ ನರ್ಸ ಬಂದಾಳೆ. (೧೦) ಒಬ್ಬ ಸಾವಕಾರನ ಮನೆಯೊಳಗೆ ಅವನ ಹೆಂಡತಿ ಹೊರಗೆ ಕೂತಿರುವಾಗ ಅವಳ ಗೆಳತಿ ಬರುತ್ತಾಳೆ. ಆಕೆಯ ಗುರ್ತು ಆಕೆಗೆ ಹತ್ತುವದಿಲ್ಲ.

(ಕ) (೧) ಇವನು ಕಳವುಮಾಡಿರುತ್ತಾನೆ. ಇವರು ಹಿಡಕೊಂಡು ಹೋಗುತ್ತಾರೆ. (೨) ಒಂದು ಮೋಟರ ಫಾಸ್ಟ ಹೋಗಲಿಕ್ಕೆ ಹತ್ತಿದೆ. ಮುಂದಿನ ಹುಡುಗನು ಧಾಂದಲೆ ಹಾಕುತ್ತಿದ್ದನು ಎಂತ ಹಿಂದಿನವನು ಜಗ್ಗಲಿಕ್ಕೆ ಹತ್ಯಾನೆ. (೩) ಒಂದು ಮೋಟರ ಜೋರಲೆ ಬಂದದೆ. ಇವನ ಮೇಲೆ ಹಾಯುತ್ತಿತ್ತು. ಇವರಿಬ್ಬರೂ ಗಾಬರಿಯಾಗ್ಯಾರೆ. (೪) ಕಳ್ಳನು ಓಡುತ್ತಿರುವದರಿಂದ ಸಿಪಾಯರು ಮೋಟರಿನೊಳಗೆ ಬಂದು ಅವನನ್ನು ಹಿಡಿಯುತ್ತಿರುವರು. (೫) ಇವನು ಮೋಟರ ಗಾಲಿಯೊಳಗೆ ಸಿಗುವ ಹಾಗೆ ಆಗುತ್ತಾನೆ. ಅಷ್ಟರೊಳಗೆ ಅವನ ಮಿತ್ರನು ಇತ್ತಲಾಗಿ ಜಗ್ಗಿ ರಕ್ಷಣ ಮಾಡುತ್ತಾನೆ. (೬) ಇಬ್ಬರು ಹೋಗುತ್ತಿದ್ದರು. ಆ ಕಾಲಕ್ಕೆ ಮೋಟರ ಬಂತು. ಅವನು ಮೋಟರಿನೊಳಗೆ ಸಿಗುತ್ತಿದ್ದನು. ಅಷ್ಟರೊಳಗೆ ಅವನ ಗೆಳೆಯನು ಹಿಡಿದನು. (೭) ಒಂದು ಮೋಟರಕಾರ ಹೋಗಲಿಕ್ಕೆ ಹತ್ತಿದೆ. ಒಬ್ಬವನು ಮೂರ್ಛೆ ಬಂದು ಬಿದ್ದಾನೆ. ದವಾಖಾನೆಗೆ ಒಯ್ಯುತ್ತಾರೆ. (೮) ಮೋಟರ ಎಕ್ಸಿಡೆಂಟ. ಸಿಗುತ್ತೇನೆ ಎಂತ ಈಚೆಗೆ ಸರಿದಾನೆ. (೯) ಯಾವನೋ ಒಬ್ಬನು ಮೋಟರ ತಕ್ಕೊಂಡು ಹೋಗಲಿಕ್ಕೆ ಹತ್ಯಾನೆ. ಅವನ ವೈರಿಗಳು ಅವನನ್ನು ನಿಂದಿರಿಸಿ ಅವನನ್ನು

ಹೊರಗೆ ತೆಗೆದು ಮೋಟರ ಹೊಡಕೊಂಡು ಹೋಗುತ್ತಾರೆ. (೧೦) ಇವನು ಸಿಂದಿ ಕುಡಿದಾನೆ. ಮೋಟರ ಬಂದಕೂಡಲೆ ಬೀಳುತ್ತಾನೆ ಎಂತ ಅವನ ಗೆಳೆಯನು ಬಾಜುಕೆ ತೆಗೆಯುತ್ತಾನೆ.

(ಡ) (೧) ಒಳಗೆ ಊಟಕ್ಕೆ ಕೂತಾನೆ. ಈಕೆಗೆ ತಾರ ಬಂದದೆ. ಊಟಕ್ಕೆ ಕೂತವನಿಗೆ ಹೇಳಲಾರದೆ ಇಲ್ಲಿ ಬಂದು ದುಃಖಮಾಡಿಕೋತ ಕೂತಾಳೆ. (೨) ಈಕೆ ಒಳ್ಳೇ ವಿಚಾರಮಗ್ನಳಾಗ್ಯಾಳೆ. ಇವನು ಏನೋ ದುಃಖಕರವಾದ ಸುದ್ದಿ ಹೇಳಲಿಕ್ಕೆ ಬಂದಾನೆ. (೩) ಗಂಡನ ಸಲುವಾಗಿ ಹೆಂಡತಿಯು ಚಿಂತೆಮಾಡುತ್ತ ಕೂತಿರುವಳು. (೪) ಒಬ್ಬವನು ಕಪಾಟಿನ ಸಂದಿಯೊಳಗೆ ಕೂತುಕೊಂಡು ಈ ಹೆಣ್ಣುಮಗಳಿಗೆ ನಿದ್ದೆ ಹತ್ತುವ ತನಕ ಅಡಗಿಕೊಂಡಾನೆ. (೫) ವಿಚಾರಮಾಡಿಕೋತ ಕೂತಾಳೆ—ಇವನು ಏನೋ ಅಂದಾನೆ ಈಕೆಗೆ ಅದಕ್ಕೆ. (೬) ಗಂಡ ಹೆಂಡತಿ. ಹೆಂಡತಿ ಸಿಟ್ಟಿಗೆದ್ದು ಮಲಗಿಕೊಂಡಾಳೆ. ಗಂಡ ಊಟಮಾಡುತ್ತಾನೆ. (೭) ವಿಚಾರಮಾಡಲಿಕ್ಕೆ ಹತ್ತ್ಯಾಳೆ—ಅವರ ಪೈಕಿ ಯಾರೋ ಹೊರಗೆ ಹೋಗಿದ್ದರು ಅವರು ಇನ್ನೂ ಬಂದಿಲ್ಲ ಎಂತ ವಿಚಾರಮಾಡುತ್ತಾಳೆ. (೮) ಈಕೆಗೆ ಏನೋ ಕೆಡಕು ಆಗಿದೆ. ಅದಕ್ಕೆ ಅವಳು ದುಃಖಮಾಡಲಿಕ್ಕೆ ಹತ್ತ್ಯಾಳೆ. (೯) ಈಕೆಯನ್ನು ಗಂಡ ಹೊಡೆದಾನೆ. ಮುಂದೆ ತಾನೇ ನೀಡಿಕೊಂಡು ಉಣ್ಣಲಿಕ್ಕೆ ಕೂತಾನೆ. ಹೊಡೆದ ಘಳಿಗ್ಗೆ ಆಕೆ ಅತ್ತುಕೋತ ಕೂತಾಳೆ. (೧೦) ಗೃಹಸ್ಥ ಮತ್ತು ಹೆಂಡತಿ ನ್ಯಾಯಾಡಿದ್ದರು ಎಂತ ಕಾಣಿಸುತ್ತದೆ. ಆಕೆಯು ನ್ಯಾಯಾಡಿ ಹೊರಗೆ ಬಂದು ಕೂತಾಳೆ. ಗಂಡನು ಒಬ್ಬನೇ ಊಟಕ್ಕೆ ಕೂತಾನೆ. (೧೧) ಒಂದು ಮನೆಯೊಳಗೆ ಗಂಡ ಹೆಂಡತಿ ಇರುತ್ತಾರೆ. ಗಂಡ ಊಟಕ್ಕೆ ಕೂತಾಗ ಹೆಂಡತಿ ತಾನು ಕೆಟ್ಟ ಕೆಲಸಮಾಡಿದ್ದು ಗಂಡನಿಗೆ ತಿಳಿಸಲಿಕ್ಕೆ ಹೆದರಿ ವಿಚಾರಮಾಡಿಕೋತ ಕೂತಿರುತ್ತಾಳೆ. (೧೨) ಈಕೆಯು ತಲೆ ನೋಯಿಸುತ್ತದೆ ಎಂತ ಕೂತಾಳೆ. ಆವಾಗ್ಗೆ ಏನು ಮಾಡಬೇಕೆಂದು ವಿಚಾರದೊಳಗೆ ಕೂತಾನೆ.

## ತಪ್ಪು

(ಅ) (೧) ಮಳೆ ಬರುತ್ತದೆ ಆ ಹೊತ್ತಿನೊಳಗೆ ಇಬ್ಬರು ಎದುರಿಂದ ಬರುತ್ತಾರೆ. ಆವಾಗ್ಗೆ ಗುರ್ತಿನಸೈಕಿ ಎಂದು ದಿಟ್ಟಿಸಿ ನೋಡುತ್ತಾರೆ.

(೨) ಮಳೆಯು ಬೀಳಲಿಕ್ಕೆ ಹತ್ತಿದೆ. ಮೂರೂ ಮಂದಿ ಕೊಡೆ ಹಿಡಿದಾರೆ. ಇವರಿಬ್ಬರೂ ಮಾತಾಡಲಿಕ್ಕೆ ಹತ್ತ್ಯಾರೆ. (೩) ತೋಟದ್ದು. ಮಳೆ ಬರಲಿಕ್ಕೆ ಹತ್ತಿದೆ. (೪) ಇವರು ಎಲ್ಲಿಯೋ ನಡಕೋತ ಹೋಗಲಿಕ್ಕೆ ಹತ್ತ್ಯಾರೆ. ನಡುವೆ ಭೆಟ್ಟಿಯಾಗ್ಯಾರೆ. (೫) ಮನುಷ್ಯರು ಛತ್ರಿ ಹಿಡ ಕೊಂಡು ಹೋಗುತ್ತಾರೆ. (೬) ಇವನು ಇವನು ಮಾತಾಡಲಿಕ್ಕೆ ಹತ್ತ್ಯಾರೆ. (೭) ಮಳೆಯದು. ಇವರು ಹೋಗಬೇಕಾದರೆ ದಾರಿಯಲ್ಲಿ ಮಳೆ ಬಹಳ ಹತ್ತಿದೆ. ಆವಾಗ್ಗೆ ಛತ್ರಿ ಏರಿಸಿಕೊಂಡು ಹೋಗುತ್ತಾರೆ.

(ಬ) (೧) ಒಬ್ಬಾಕೆಯು ಪಾಟಿಗಂಟು ಹಿಡಿದು ಹೋಗುತ್ತಾಳೆ. ಒಬ್ಬಾಕೆಯು ಖುರ್ಚಿಯ ಮೇಲಿಂದ ಎದ್ದಿರುತ್ತಾಳೆ. (೨) ಇವರು ಇವರು ಮಾತಾಡಲಿಕ್ಕೆ ಹತ್ತ್ಯಾರೆ. (೩) ಗೆಳೆತನ ವಿಷಯದ್ದು. ಗುಡಿಗೆ ಹೋಗುವ ವಿಷಯದ್ದು. (೪) ಈಕೆಯು ಕೊಡದೊಳಗೆ ನೀರು ತುಂಬ ಕೊಂಡು ಬಂದಾಳೆ. ಈಕೆ ಆಕೆ ಬಂದನಂತರ ಎದ್ದು ನಿಂತಾಳೆ. (೫) ಬಾಗಿಲ ಮುಂದೆ ನಿಂತು ಮಾತಾಡಿಕೋತ ನಿಂತಾರೆ. ಒಂದು ನಾಯಿ ಕೂತದೆ.

(ಕ) (೧) ಜಗಳಾಡಲಿಕ್ಕೆ ಹತ್ತ್ಯಾರೆ. ಮೋಟರಿನೊಳಗೆ ಕೂತು ಕೊಂಡಾರೆ. ಗಾಲಿಗೆ ಕಾಲು ಹಿಡಿದಾನೆ. ಬೀಳಲಿಕ್ಕೆ ಆಗ್ಯಾನೆ. (೨) ಗೋಡೆ ಹಿಡಕೊಂಡು ನಿಂತಾನೆ. (೩) ಒಬ್ಬವನು ಬಾಣಜಿಡಲಿಕ್ಕೆ ಹತ್ತ್ಯಾನೆ. (೪) ಮೋಟರಿನೊಳಗೆ ಕೆಲವು ಮಂದಿ ಕೂತಾರೆ. ಒಬ್ಬವನು ಜಿಗಿದಾನೆ, ಹಿಡಿಯಲಿಕ್ಕೆ ಹೋಗ್ಯಾನೆ. (೫) ನಾಯಕಲಮೋಟರ ಒಬ್ಬವನು ಹತ್ತಲಿಕ್ಕೆ ಹೋಗ್ಯಾನೆ. ಮತ್ತೊಬ್ಬನು ಅವನಿಗೆ ನೂಕಿ ತಾನು ಹತ್ತುತ್ತಾನೆ. (೬) ಇಲ್ಲಿ ಒಂದು ಮೋಟರ ಬರಲಿಕ್ಕೆ ಹತ್ತಿದೆ. ಇವನನ್ನು ಇವನು ಹಿಡಿದಾನೆ.

(ಡ) (೧) ಊಟಕ್ಕೆ ಕೂತಾನೆ. (೨) ಈಕೆ ಮಲಗಿಕೊಂಡಾಳೆ ಮತ್ತು ಇವನು ಊಟಕ್ಕೆ ಕೂತಾನೆ. (೩) ಒಬ್ಬಾಕೆ ಹೆಂಗಸು ಮಲಗಿ ಕೊಂಡಾಳೆ. ಒಂದು ಬೆಕ್ಕು ಅದೆ. (೪) ಒಬ್ಬಾತ ಊಟಕ್ಕೆ ಕೂತಾನೆ. ಒಬ್ಬಾಕೆ ಪಲಂಗದ ಮೇಲೆ ಚಿಂತೆಮಾಡಿಕೋತ ಕೂತಾಳೆ. (೫) ಮಲಗಿ ಕೊಂಡದ್ದರ ವಿಷಯದ್ದು. (೬) ಅರಸಿ ಮಲಗಿದ್ದಾಳೆ. ಒಬ್ಬ ಹುಡುಗ ಬಂದು ಏನೋ ತಿನ್ನಲಿಕ್ಕೆ ಹತ್ತ್ಯಾನೆ. (೭) ಒಬ್ಬಾಕೆ ಹೆಂಗಸು ಖುರ್ಚಿಯ ಮೇಲೆ ಕೂತಾಳೆ. ಮತ್ತೊಬ್ಬನು ನೋಡಲಿಕ್ಕೆ ಹತ್ತ್ಯಾನೆ.

**ವೈಕಲ್ಪಿಕ ಪ್ರಶ್ನೆ ೧.**—ಶಬ್ದಕೋಶ—೩೦ ಶಬ್ದಗಳು, ಅಂದರೆ ಒಟ್ಟು ೨೮,೦೦೦ ಶಬ್ದಗಳಲ್ಲಿ ೮,೪೦೦ ಕನ್ನಡ ಶಬ್ದಗಳು.

(ವರ್ಷ ೯, ವೈಕಲ್ಪಿಕ ಪ್ರಶ್ನೆಯಂತೆ.)

**ವೈಕಲ್ಪಿಕ ಪ್ರಶ್ನೆ ೨.**—ಆರು ಅಂಕೆಗಳನ್ನು ಮತ್ತೆ ಅನ್ನುವದು (೩ರಲ್ಲಿ ೧. ಸೆಕಂಡಿಗೆ ಒಂದರಂತೆ ಓದಬೇಕು).

ಈ ವರ್ಷದ ಅಂಕಮಾಲೆಗಳು—

೩—೭—೪—೮—೫—೯ ; ೫—೨—೧—೭—೪—೬ ; ೪—೭—೧—೫—೮—೨.

(ಪದ್ಧತಿಯು ಹಿಂದಿನ ವರ್ಷಗಳ ಅಂಕಮಾಲೆಗಳ ಪ್ರಶ್ನೆಗಳಂತೆಯೇ.)

**ವೈಕಲ್ಪಿಕ ಪ್ರಶ್ನೆ ೩.**—ಗ್ರಹಿಸುವದು—ನಾಲ್ಕನೆಯ ತರಗತಿ (೩ರಲ್ಲಿ ೨. ಪ್ರತಿಯೊಂದು ಪ್ರಶ್ನೆಯನ್ನು ೫ ಸೆಕಂಡಿನ ಮೇಲೆ ಎರಡನೇ ಸಾರಿ ಕೇಳಬೇಕು. ವೇಳೆ ೧/೨ ಮಿನೀಟು).

(ಅ) "ನಿನಗೆ ಚಲೋ ಗುರುತು ಇಲ್ಲದಂಥ ಒಬ್ಬ ಹುಡುಗನ (ಗಿಯ) ವಿಷಯಕ್ಕೆ ನಿನ್ನ ಮತವೇನದೆ, ಅವನ ವಿಷಯಕ್ಕೆ ನಿನ್ನ ಅಭಿಪ್ರಾಯ ವೇನದೆ ಎಂದು ಯಾರಾದರೂ ನಿನಗೆ ಕೇಳಿದರೆ, ನೀನು ಏನು ಉತ್ತರ ಕೊಡಬೇಕು ?"

(ಬ) "ಏನಾದರೂ ಬಹಳ ಮಹತ್ವದ ಕೆಲಸವನ್ನು ಆರಂಭಿಸುವದಕ್ಕಿಂತ ಮುಂಚೆ ನೀನು ಏನು ಮಾಡಬೇಕು ?"

(ಕ) "ಒಬ್ಬ ಮನುಷ್ಯನ ಪರೀಕ್ಷೆಯನ್ನು ಅವನ ಮಾತಿಗಿಂತ ಅವನು ಮಾಡಿದ ಕೆಲಸದ ಮೇಲಿಂದ ಯಾಕೆ ಮಾಡಬೇಕು ?"

(ವರ್ಷ ೮, ಪ್ರಶ್ನೆ ೩ರಂತೆ.)

ಹುಡುಗರ ಉತ್ತರಗಳು—

ಸಮ

(ಅ) ಅವಳದು ನನಗೆ ಗುರ್ತು ಇಲ್ಲ ; ನನಗೆ ಗೊತ್ತಿಲ್ಲ ಅಂತ ; ನನಗೆ ಗೊತ್ತಿಲ್ಲ ಅನ್ನಬೇಕು—ಅವನ ವಿಷಯಕ್ಕೆ ; ಆಕೆಗೆ ನೋಡಿದ ಹೊರತು ಹೇಳಲಿಕ್ಕೆ ಆಗುವದಿಲ್ಲ ; ಆಕೆಯು ನನಗೆ ಪರಿಚಯ ಇಲ್ಲ ಆದ್ದರಿಂದ

ಆಕೆಯ ವಿಷಯಕ್ಕೆ ನನಗೆ ಹೇಳಲಿಕ್ಕೆ ಆಗುವದಿಲ್ಲ; ಆಕೆಯದು ನನಗೆ ಗೊತ್ತಿಲ್ಲ ಆದರೂ ಆಕೆಯು ಚಲೋ ಇದ್ದಿದ್ದಾಳು; ಆ ಹುಡುಗನ ವಿಷಯಕ್ಕೆ ಏನೂ ಗೊತ್ತಿಲ್ಲ; ಅವನ ಹೆಸರು ಗೊತ್ತಿಲ್ಲ—ಅವನು ಯಾವ ಊರಿನವನೂ ಗೊತ್ತಿಲ್ಲ—ಮತ್ತು ಅವನ ವಿಷಯಕ್ಕೆ ನನಗೆ ಏನೂ ಗೊತ್ತಿಲ್ಲ; ನನಗೆ ಗೊತ್ತಿಲ್ಲ ಅನ್ನಬೇಕು; ಅವನದು ನನಗೆ ಏನೂ ಗುರುತು ಇಲ್ಲ ಮತ್ತು ಗುರುತು ಇಲ್ಲದವನ ಮಾತು ಹೇಗೆ ಹೇಳಲಿ; ನನಗೆ ಅವನ ವಿಷಯದಲ್ಲಿ ಗೊತ್ತಿದ್ದನ್ನು ಹೇಳಬೇಕು.

(ಬ) ವಿಚಾರಮಾಡಬೇಕು; ಕೆಲಸ ಯಾರಾರು ಮಾಡಿರುತ್ತಾರೆ ಅವರಿಗೆ ಕೇಳಬೇಕು—ಮುಂದೆ ಫಲ ಸಿಗುತ್ತದೆಯೋ ಇಲ್ಲವೋ ವಿಚಾರ ಮಾಡಿ ಆ ಕೆಲಸಮಾಡಬೇಕು; ಮೊದಲೇ ವಿಚಾರಮಾಡಬೇಕು; ವಿಚಾರ ಮಾಡಿ ಮಾಡಬೇಕು; ಮೊದಲು ಅದನ್ನು ತಯಾರಿಸಿ ಇಡಬೇಕು; ನಾನು ಅದನ್ನು ಹ್ಯಾಗೆ ಮಾಡಬೇಕೆಂದು ಆಲೋಚನೆ ಮಾಡಬೇಕು; ಅದಕ್ಕೆ ಏನು ಬೇಕು ಎಲ್ಲ ತಕ್ಕೊಂಡು ಸಜ್ಜ ಮಾಡಬೇಕು; ಅದನ್ನು ನೋಡಿಕೊಂಡು ಮಾಡಬೇಕು; ತಯಾರಮಾಡಿ ಇಡಬೇಕು; ಅದು ಹ್ಯಾಗೆ ಮಾಡಬೇಕು ಮತ್ತು ಅದರ ಬಗ್ಗೆ ಎಲ್ಲ ಮಾಹಿತಿಯನ್ನು ಕೂಡಿಸಿ ಕಡೆಗೆ ಅದನ್ನು ಮಾಡಲಿಕ್ಕೆ ಆರಂಭಿಸಬೇಕು.

(ಕ) ಮಾತಾಡಿದ್ದಕ್ಕಿಂತ ಕೈಲೆ ಕೆಲಸಮಾಡಿದರೆ ಖರೆ ಅನಿಸುತ್ತದೆ; ಅವನ ಮಾತಿನ ಮೇಲಿಂದ ನಂಬಬಾರದು; ಅವನು ಮಾಡಿದ ಕೆಲಸನೇ ಹೆಚ್ಚು ಮಹತ್ವದ್ದು ಇರುತ್ತದೆ; ಬರೇ ಮಾತಾಡುವದರೊಳಗೇ ಇರುತ್ತಾನೋ ಅಥವಾ ಅವನ ಕೈಲೆ ಏನಾದರೂ ಆಗುತ್ತದೆಯೋ ವಿಚಾರ ಮಾಡಬೇಕು; ಮಾತಾಡುವಾಗ ಹೆಚ್ಚಿಸಿಕೊಂಡು ಮಾತಾಡುತ್ತಾನೆ ಮಾಡಿದ ಕೆಲಸ ನೋಡಿದರೆ ಗೊತ್ತಾಗುತ್ತದೆ.

## ತಪ್ಪು

(ಅ) ಆ ಹುಡುಗಿ ನನಗೆ ಗೊತ್ತಿಲ್ಲ, ಇಲ್ಲದಿದ್ದರೆ ಆ ಹುಡುಗಿಯ ಮನೆ ಹುಡುಕಿ ಅವರ ಮನೆಗೆ ಕಳಿಸಬೇಕು; ಗುರ್ತು ಇಲ್ಲ ಪತ್ತು ಇಲ್ಲ ಹಾಗೇ ಮಾತಾಡಿಸುವದು; ಚಲೋ ಇದ್ದೇವೆ; ಅವನ ಏನಾದರೂ ಅರ್ಜಂಟ ಕೆಲಸ ಇದ್ದರೆ ನಾವು ಮಾಡಬೇಕು; ನನಗೆ ಅವನು

ವೈರಿಯಾಗುತ್ತಾನೆ—ಜಗಳಾಡುತ್ತಾನೆ—ಆದಕ್ಕೆ ನಾನು ಅವನ ಕೂಡ ಮಾತಾಡುವದಿಲ್ಲ; ಅಭಿಪ್ರಾಯ ಇಲ್ಲ; ಅವನು ಹೀಗೆ ಇದ್ದಾನೆ ಜುಟ್ಟ ಸೇದುತ್ತಾನೆ; ಅವನು ನನ್ನ ಸಂಗಡ ಇರುವನು; ಏನು ಇಲ್ಲ; ನಿನಗೆ ಯಾವ ಹುಡುಗಿ ಗೊತ್ತಿಲ್ಲ ಎಂದು; ನಾವು ಚಲೋ ಇದ್ದೇವೆ; ಆಕೆಯ ಸಂಗತಿ ಮಾತಾಡಬೇಕು.

(ಬ) ಒಂದೇ ಸವನೆ ಮಾಡಿಕೋತ ಹೋಗಬೇಕು; ಆ ಕೆಲಸ ಮಾಡಲಿಕ್ಕೆ ಸುರು ಮಾಡಬೇಕು; ತಾಯಿತಂದೆಗಳಿಗೆ ನಮಸ್ಕಾರ ಮಾಡ ಬೇಕು; ಮುಂಚೆ ನಾವು ಸಣ್ಣ ಕೆಲಸದಿಂದ ದೊಡ್ಡ ಕೆಲಸಕ್ಕೆ ಕೈಹಾಕ ಬೇಕು; ಆ ಕೆಲಸ ನಮ್ಮ ಕೈಲೆ ಆಗುತ್ತಿದ್ದರೆ ಹುಂ ಅನ್ನಬೇಕು—ಇಲ್ಲ ದಿದ್ದರೆ ಇಲ್ಲ ಎಂತ ಅನ್ನಬೇಕು; ಕೂಲೀಕಾರರಿಗೆ ಹೇಳಬೇಕು; ಲಗುನೆ ಹಿಡಿಯಬೇಕು; ಲಗುನೆ ಹೋಗಬೇಕು; ಆರಂಭಿಸಬೇಕು; ಅದನ್ನು ನಾವು ಓದಿಕೊಳ್ಳತಕ್ಕದ್ದು; ಮತ್ತಿಷ್ಟು ಹುಡುಗರನ್ನು ಕೂಡಿಸಬೇಕು; ಎಚ್ಚರಿಕೆ ಇರಬೇಕು; ಮುಂಚೆ ಲಗು ಲಗು ಮುಗಿಸಬೇಕು; ಅದನ್ನು ಮಾಡೇ ತೀರಿಸಬೇಕು; ಏನಾದರೂ ಮಾಡಬೇಕು; ಸುರುಮಾಡಬೇಕು; ಏನೂ ಮಾಡಬಾರದು; ನಾನು ಮಾಡಬೇಕು.

(ಕ) ಅವನು ಮಾಡಿದ ಕೆಲಸದೊಳಗೆ ತನ್ನ ಶಹಾಣೇತನ ತೋರಿಸು ತ್ತಾನೆ; ಚಲೋ ಲೆಖ್ಖ ಮಾಡುತ್ತಾನೆ; ಅವನು ಕೆಲಸ ಚಲೋ ಮಾಡು ತ್ತಾನೆ, ಅದರ ದೆಸೆಯಿಂದ; ಮುಂದೆ ಶಹಾಣೆ ಆಗಬೇಕು; ಮಾಡಿದ ಕೆಲಸ ಚಲೋ ಮಾಡುತ್ತಾನೆ; ಪರೀಕ್ಷೆಗೆ ಕೂತಾಗ ಕೆಲಸನೇ ಬಹಳ ಮಾಡಿರುತ್ತಾನೆ; ನಮ್ಮ ಪರೀಕ್ಷೆ ತಕ್ಕೊಳ್ಳುತ್ತಾರೆ—ನಾಪಾಸ ಆದರೆ ಮುಂದಿನ ಇಯತ್ತೆಗೆ ಹೋಗಲಿಕ್ಕೆ ಆಗುವದಿಲ್ಲ; ಅವನಿಗೆ ಬರುತ್ತದೆ ಇಲ್ಲ ನೋಡಬೇಕು; ಅವನಿಗೆ ಬುದ್ಧಿ ಅದೆಯೋ ಇಲ್ಲವೋ ಎಂದು ತಿಳಿಯ ಲಿಕ್ಕೆ; ಅವನು ಹ್ಯಾಗೆ ಮಾತಾಡುತ್ತಾನೆ ಹಾಗೆ ಪರೀಕ್ಷೆಮಾಡಬೇಕು; ಅವನು ತಿರುಗಿ ಉತ್ತರ ಕೊಡುತ್ತಿದ್ದನು; ಮಾಡಬಾರದು; ನೋಡಿ ಕೊಂಡು ಕಲಿತುಕೊಳ್ಳಬೇಕು; ಅವನ ಸಾಲೆಯೊಳಗೆ ಅಭ್ಯಾಸ ಆಗು ತ್ತದೆ—ವರ್ಷಕ್ಕೆ ಪರೀಕ್ಷೆ ತಕ್ಕೊಳ್ಳುತ್ತಾರೆ ಎಂದು; ಅವನು ತನ್ನ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೆ ಕೆಲಸಮಾಡುತ್ತಾನೆ; ಚಲೋ ಪಾಸಾಗುತ್ತಾನೋ ನೋಡಲಿಕ್ಕೆ.

## ವರ್ಷ ೧೪

**ಪ್ರಶ್ನೆ ೧.**—ತರ್ಕಪರೀಕ್ಷೆಯು—ನಿಯಮವನ್ನು ಹುಡುಕಿ ತೆಗೆಯುವದು (ಆರನೆಯ ಮಡಿಕೆಯಾಗುವಷ್ಟರಲ್ಲಿ ನಿಯಮವನ್ನು ಹುಡುಕಿ ತೆಗೆಯತಕ್ಕದ್ದು. ಹುಡುಗನು ಪ್ರತಿ ಸಾರಿ ತೂತುಗಳ ಸಂಖ್ಯೆಯನ್ನು ಹೇಳಿದ ಮೇಲೆ ಅವನಿಗೆ ಕಾಗದವನ್ನು ಬಿಚ್ಚಿ ತೋರಿಸಬೇಕು).

ತೆಳ್ಳಗಿನ ಹಳೇ ವರ್ತಮಾನಪತ್ರಗಳ ಅಥವಾ ಬಿಳೇ ಹಾಳಿಗಳ ಅಜಮಾಸು ೬ ಇಂಚು × ೯ ಇಂಚು ಆಕಾರದ ಎಷ್ಟೋ ತುಂಡುಗಳನ್ನು ತಯಾರ ಮಾಡಿ ಇಡಬೇಕು. ಇವುಗಳ ಪೈಕಿ ಒಂದನ್ನು ತಕ್ಕೊಂಡು ಹುಡುಗನಿಗೆ ಕೆಳಗಿನಂತೆ ಅನ್ನಬೇಕು—

"ನಾನು ಈಗ ಏನು ಮಾಡುತ್ತೇನೆ, ನೋಡು."

ಹೀಗೆ ಅಂದು ಕಾಗದವನ್ನು ಒಮ್ಮೆ ಮಡಿಚಬೇಕು ಮತ್ತು ಮಡಿಕೆಯ ಮಧ್ಯದಲ್ಲಿ ಒಂದು ಸಣ್ಣ ತ್ರಿಕೋಣಾಕಾರದ ತೂತನ್ನು ಕತ್ತರಿಯಿಂದ ಮಾಡಬೇಕು. ಮುಂದೆ—

"ಈಗ ಈ ಕಾಗದವನ್ನು ಬಿಚ್ಚಿದ ಕೂಡಲೆ ಇದರೊಳಗೆ ಎಷ್ಟು ತೂತುಗಳು ಕಾಣುವವು ?" ಎಂದು ಕೇಳಬೇಕು.

ಹುಡುಗನ ಉತ್ತರವು ಬೇಕಾದ್ದು ಇದ್ದರೂ ಅದನ್ನು ಹೇಳಿದ ಮೇಲೆ ಕಾಗದವನ್ನು ಪ್ರತಿ ಸಾರೆ ಬಿಚ್ಚಬೇಕು ಮತ್ತು ಹುಡುಗನು ಪರೀಕ್ಷಿಸಿ ನೋಡುವದಕ್ಕಾಗಿ ಮೇಲೆ ಎತ್ತಿ ಹಿಡಿಯಬೇಕು.

ಮುಂದೆ ಎರಡನೆಯ ಕಾಗದವನ್ನು ತಕ್ಕೊಳ್ಳಬೇಕು ಮತ್ತು ಮುಂಚಿನಂತೆ ಒಮ್ಮೆ ಮಡಿಚಿ ಹೀಗೆ ಅನ್ನಬೇಕು—

"ನಾವು ಮುಂಚೆ ಹೀಗೆ ಒಮ್ಮೆ ಮಡಿಚಿ ಈ ಸ್ಥಳದಲ್ಲಿ ಕತ್ತರಿಸಿದಾಗ ಇದರೊಳಗೆ ಒಂದು ತೂತು ಆಗಿತ್ತು, ನೀನು ನೋಡಿದ್ದಿ. ಈ ಸಾರೆ ನಾವು ಈ ಕಾಗದಕ್ಕೆ ಇನ್ನೊಂದು ಮಡಿಕೆ ಹಾಕೋಣ. ಈಗ ಇದರೊಳಗೆ ಎಷ್ಟು ತೂತು ಆಗುವವು ?"

ಮೂರನೇ ಕಾಗದವನ್ನು ತಕ್ಕೊಂಡು ಹೀಗೆ ಅನ್ನಬೇಕು—

"ನಾವು ಕಾಗದವನ್ನು ಈ ಪ್ರಕಾರ ಮಡಿಚಿದಾಗ ಒಂದು ತೂತು ಆಗಿತ್ತು. ಮತ್ತು ಹೀಗೆ ಮಡಿಚಿದಾಗ ಎರಡು ತೂತುಗಳು ಆಗಿದ್ದವು. ಈಗ ನಾನು ಇನ್ನೊಮ್ಮೆ ಮಡಿಚುತ್ತೇನೆ. ಈಗ ನಾನು ಇದನ್ನು ಬಿಚ್ಚಿದ ಕೂಡಲೆ ಇದರೊಳಗೆ ಎಷ್ಟು ತೂತುಗಳು ಕಾಣಿಸುವವು ?"

ಪ್ರತಿ ಸಾರಿ ಸಂಕ್ಷೇಪವಾಗಿ ಹೇಳುವಾಗ, ಉದಾಹರಣಾರ್ಥವಾಗಿ ಆರನೆಯ ಸರತಿ, ಹೀಗೆ ಅನ್ನಬೇಕು—

"ನಾವು ಹೀಗೆ ಮಡಿಚಿದಾಗ ಒಂದು ತೂತು ಅಗಿತ್ತು. ತಿರುಗಿ ಮಡಿಚಿದಾಗ ಎರಡು ತೂತುಗಳು ಆಗಿದ್ದವು. ಮತ್ತೊಮ್ಮೆ ಮಡಿಚಿದಾಗ ನಾಲ್ಕು ತೂತುಗಳಾಗಿದ್ದವು. ಮತ್ತೊಮ್ಮೆ ಮಡಿಚಿದಾಗ ಎಂಟು ತೂತುಗಳಾಗಿದ್ದವು. ಮತ್ತೂ ಒಮ್ಮೆ ಮಡಿಚಿದಾಗ ಹದಿನಾರು ತೂತುಗಳಾಗಿದ್ದವು. ಈಗ ಇನ್ನೊಮ್ಮೆ ಮಡಿಚಿದರೆ ಎಷ್ಟು ತೂತುಗಳಾಗುವವು, ಹೇಳು."

ಹುಡುಗನು ಉತ್ತರ ಕೊಟ್ಟಮೇಲೆ ವಾಡಿಕೆಯಂತೆ ಕಾಗದವನ್ನು ಹುಡುಗನಿಗೆ ಬಿಚ್ಚಿ ತೋರಿಸಬೇಕು.

ಹುಡುಗನನ್ನು ಅನುಲಕ್ಷಿಸಿ ನುಡಿಯುವ ಮಾತುಗಳಲ್ಲಿ "ಮೊದಲನೇ ಸಾರಿ", "ಎರಡನೇ ಸಾರಿ"—ಈ ಶಬ್ದಗಳನ್ನು ಉದಾಹರಣಾರ್ಥವಾಗಿ "ನಾವು ಇದನ್ನು ಮೊದಲನೇ ಸಾರಿ ಮಡಿಚಿದಾಗ" "ನಾವು ಇದನ್ನು ಎರಡನೇ ಸಾರಿ ಮಡಿಚಿದಾಗ" ಹೀಗೆ, ಉಪಯೋಗಿಸಬಾರದು. ಯಾಕಂದರೆ, ಇವುಗಳಿಂದ ಹುಡುಗರಿಗೆ ಸಹಾಯವು ಸಿಗಬಹುದು ಅಥವಾ ಅವರು ಅಡ್ಡಹಾದಿಗೂ ಹೋಗಬಹುದು. ಅವರಿಗೆ ತಮ್ಮಷ್ಟಕ್ಕೇ ನಿಯಮವನ್ನು ಹುಡುಕಿ ತೆಗೆಯಲಿಕ್ಕೆ ಆಸ್ಪದ ಕೊಡಬೇಕು. ಹುಡುಗನ ಕಡೆಯ ಉತ್ತರದ ಮೇಲೆ ಅಂದರೆ ಆರನೇ ಸರತಿ ಕತ್ತರಿಸಿದ್ದಕ್ಕೆ ಉತ್ತರ ಕೊಟ್ಟ ಮೇಲೆ ಅವನಿಗೆ—

"ನೀನು ಹೇಗೆ ಹುಡುಕಿ ತೆಗೆದಿ, ಹೇಳು" ಎಂದು ಕೇಳಬೇಕು. ಮೊದಲಿನ ಉತ್ತರಗಳು ಸರಿ ಇದ್ದರೂ ಈ ಪ್ರಶ್ನೆಯನ್ನು ಆರನೆಯ ಮಡಿಕೆಗಿಂತ ಮುಂಚೆ ಕೇಳಬಾರದು.

ಪಾಸಾಗಬೇಕಾದರೆ ಹುಡುಗನು ನಿಯಮವನ್ನು ಸರಿಯಾಗಿ ಹೇಳಬೇಕು.

**ಪ್ರಶ್ನೆ ೨.**—ವಿಚ್ಛಿನ್ನವಾದ ವಾಕ್ಯಗಳು (೩ರಲ್ಲಿ ೨. ಪ್ರತಿಯೊಂದಕ್ಕೆ ೧ ಮಿನೀಟು).

ಕೆಳಗಿನ ವಿಚ್ಛಿನ್ನವಾದ ವಾಕ್ಯಗಳ ಛಾಪಿಸಿದ ಕಾರ್ಡನ್ನು ಉಪಯೋಗಿಸಬೇಕು—

(ಅ) ಹೇಳಿದೆನು ಕಾಗದವನ್ನು ನನ್ನ ಶಿಕ್ಷಕನಿಗೆ ನೋಡಲಿಕ್ಕೆ ನಾನು ನನ್ನ ಪರೀಕ್ಷೆಯು.

(ಬ) ಮಾಡುತ್ತದೆ ರಕ್ಷಣವನ್ನು ನಾಯಿಯು ಚಲೋ ತನ್ನ ಶೂರತನದಿಂದ ಯಜಮಾನನ.

(ಕ) ಹಳ್ಳಿಗೆ ನಾವು ನಮ್ಮ ಫಲಾರವನ್ನು ಹೊರಟೆವು ಎದ್ದು ಮಾಡಿ ಹೋಗಲಿಕ್ಕೆ ಮುಂಜಾನೆ.

ಅಚ್ಚು ಹಾಕಿದ ವಾಕ್ಯಗಳ ಕಾರ್ಡನ್ನು ಹುಡುಗನ ಎದುರಿಗೆ ಇಟ್ಟು ಮೊದಲನೇ ವಾಕ್ಯವನ್ನು ಬಿಟ್ಟು ಉಳಿದವುಗಳನ್ನು ಕಾರ್ಡಬೋರ್ಡಿನಿಂದ ಅಥವಾ ಬಿಳೇ ಹಾಳೆಯಿಂದ ಮುಚ್ಚಬೇಕು. ಮುಂದೆ ಕೆಳಗಿನಂತೆ ಅನ್ನಬೇಕು—

"ಇಲ್ಲಿ ನೋಡು ಒಂದು ವಾಕ್ಯವದೆ. ಆದರೆ ಇದರೊಳಗಿನ ಶಬ್ದಗಳನ್ನು ಹಿಂದೆ ಮುಂದೆ ಹಾಕಿದ್ದರಿಂದ ಅದರ ಅರ್ಥವೇನೂ ಆಗುವದಿಲ್ಲ. ಈ ಶಬ್ದಗಳನ್ನು ತೆಗೆದು ತಕ್ಕ ಸ್ಥಳದಲ್ಲಿ ಹಾಕಿದರೆ ಚಲೋ ವಾಕ್ಯವಾಗುವದು. ಲಕ್ಷ್ಯಗೊಟ್ಟು ನೋಡು ಮತ್ತು ಈ ವಾಕ್ಯವು ಹ್ಯಾಗೆ ಇರಬೇಕು ಹೇಳು."

ಒಂದು ಮಿನೀಟಿನೊಳಗೆ ಹುಡುಗನಿಗೆ ಉತ್ತರ ಕೊಡಲಿಕ್ಕೆ ಬಾರದಿದ್ದರೆ ಮೊದಲನೇ ಸಾರಿ ವಾಕ್ಯವನ್ನು ಅನ್ವಯಕ್ರಮದಿಂದ ಪ್ರತಿಯೊಂದು ಶಬ್ದದ ಮೇಲೆ ಬೆರಳಿಟ್ಟು ಓದಿ ತೋರಿಸಬೇಕು.

ಹುಡುಗನ ಉತ್ತರ ಬಂದ ಮೇಲೆ ಪ್ರತಿ ಸಾರಿ ಅವನು ಕೊಟ್ಟ ವಾಕ್ಯವನ್ನು ಅವನಿಗೆ ತಿರುಗಿ ಓದಿಹೇಳಬೇಕು; ಮತ್ತು "ಇದು ಸಮವಾಗಿ ಆಯಿತೇನು?" ಎಂದು ಕೇಳಬೇಕು.

ಹುಡುಗನಿಗೆ ಸರಿಯಾಗಿ ತಿಳಿಯದೆ ಅವನು ಹೊರಗಿನ ಶಬ್ದಗಳನ್ನು ಹಾಕಲಿಕ್ಕೆ ಹತ್ತಿದರೆ, ಅವನಿಗೆ "ಹೀಗಲ್ಲ, ಹೊಸ ಶಬ್ದಗಳನ್ನು ಹಾಕ

ಬಾರದು" ಎಂದು ಹೇಳಿ, ಅವನಿಗೆ ಮತ್ತೊಮ್ಮೆ ಪ್ರಯತ್ನ ಮಾಡಲಿಕ್ಕೆ ಹೇಳಬೇಕು. ಆದರೆ ಇಂಥ ಪ್ರಸಂಗವು ಕ್ವಚಿತ್ತಾಗಿ ಬರುತ್ತದೆ.

ಇದರ ಹೊರತು ಬೇರೆ ಯಾವ ಪ್ರಶ್ನೆಗಳನ್ನು ಕೇಳಬಾರದು ಅಥವಾ ಸ್ಪಷ್ಟೀಕರಣವನ್ನು ಮಾಡಬಾರದು.

ಮುಂದೆ ಎರಡನೇ ಮತ್ತು ಮೂರನೇ ವಾಕ್ಯಗಳನ್ನು ಕೊಡಬೇಕು. ಪ್ರತಿ ಸಾರಿ ಉಳಿದ ವಾಕ್ಯಗಳನ್ನು ಮುಚ್ಚಿ ಇಡಬೇಕು.

ಹುಡುಗರ ಉತ್ತರಗಳು—

ಸಮ

(ಅ) ನಾನು ನನ್ನ ಪರೀಕ್ಷೆಯ ಕಾಗದವನ್ನು ನನ್ನ ಶಿಕ್ಷಕನಿಗೆ ನೋಡಲಿಕ್ಕೆ ಹೇಳಿದೆನು; ನಾನು ನನ್ನ ಶಿಕ್ಷಕನಿಗೆ ನನ್ನ ಪರೀಕ್ಷೆಯ ಕಾಗದವನ್ನು ನೋಡಲಿಕ್ಕೆ ಹೇಳಿದೆನು; ನಾನು ನನ್ನ ಪರೀಕ್ಷೆಯ ಕಾಗದವನ್ನು ನೋಡಲಿಕ್ಕೆ ನನ್ನ ಶಿಕ್ಷಕನಿಗೆ ಹೇಳಿದೆನು; ನನ್ನ ಪರೀಕ್ಷೆಯ ಕಾಗದವನ್ನು ನನ್ನ ಶಿಕ್ಷಕನಿಗೆ ನೋಡಲಿಕ್ಕೆ ನಾನು ಹೇಳಿದೆನು.

(ಬ) ಚಲೋ ನಾಯಿಯು ತನ್ನ ಯಜಮಾನನ ರಕ್ಷಣವನ್ನು ಶೂರತನದಿಂದ ಮಾಡುತ್ತದೆ; ಚಲೋ ನಾಯಿಯು ತನ್ನ ಶೂರತನದಿಂದ ಯಜಮಾನನ ರಕ್ಷಣವನ್ನು ಮಾಡುತ್ತದೆ; ನಾಯಿಯು ಯಜಮಾನನ ರಕ್ಷಣವನ್ನು ತನ್ನ ಶೂರತನದಿಂದ ಚಲೋ ಮಾಡುತ್ತದೆ; ನಾಯಿಯು ಶೂರತನದಿಂದ ತನ್ನ ಯಜಮಾನನ ಚಲೋ ರಕ್ಷಣವನ್ನು ಮಾಡುತ್ತದೆ; ಚಲೋ ನಾಯಿಯು ಯಜಮಾನನ ರಕ್ಷಣವನ್ನು ತನ್ನ ಶೂರತನದಿಂದ ಮಾಡುತ್ತದೆ; ಚಲೋ ನಾಯಿಯು ತನ್ನ ಯಜಮಾನನ ಶೂರತನದಿಂದ ರಕ್ಷಣವನ್ನು ಮಾಡುತ್ತದೆ; ನಾಯಿಯು ತನ್ನ ಶೂರತನದಿಂದ ಯಜಮಾನನ ಚಲೋ ರಕ್ಷಣವನ್ನು ಮಾಡುತ್ತದೆ; ನಾಯಿಯು ತನ್ನ ಚಲೋ ಶೂರತನದಿಂದ ಯಜಮಾನನ ರಕ್ಷಣವನ್ನು ಮಾಡುತ್ತದೆ; ನಾಯಿಯು ತನ್ನ ಯಜಮಾನನ ರಕ್ಷಣವನ್ನು ಚಲೋ ಶೂರತನದಿಂದ ಮಾಡುತ್ತದೆ; ನಾಯಿಯು ತನ್ನ ಶೂರತನದಿಂದ ಯಜಮಾನನ ರಕ್ಷಣವನ್ನು ಚಲೋ ಮಾಡುತ್ತದೆ.

(ಕ) ಮುಂಜಾನೆ ಎದ್ದು ಹಳ್ಳಿಗೆ ನಾವು ನಮ್ಮ ಫಲಾರವನ್ನು ಮಾಡಿ ಹೋಗಲಿಕ್ಕೆ ಹೊರಟೆವು; ಮುಂಜಾನೆ ಎದ್ದು ನಮ್ಮ ಫಲಾರವನ್ನು

ಮಾಡಿ ಹಳ್ಳಿಗೆ ಹೋಗಲಿಕ್ಕೆ ನಾವು ಹೊರಟೆವು; ನಾವು ಮುಂಜಾನೆ ಎದ್ದು ಫಲಾರವನ್ನು ಮಾಡಿ ನಮ್ಮ ಹಳ್ಳಿಗೆ ಹೋಗಲಿಕ್ಕೆ ಹೊರಟೆವು; ನಾವು ಮುಂಜಾನೆ ಎದ್ದು ನಮ್ಮ ಫಲಾರವನ್ನು ಮಾಡಿ ಹಳ್ಳಿಗೆ ಹೋಗಲಿಕ್ಕೆ ಹೊರಟೆವು; ಮುಂಜಾನೆ ನಾವು ನಮ್ಮ ಫಲಾರವನ್ನು ಮಾಡಿ ಹಳ್ಳಿಗೆ ಹೋಗಲಿಕ್ಕೆ ಎದ್ದು ಹೊರಟೆವು; ಮುಂಜಾನೆ ಎದ್ದು ನಮ್ಮ ಫಲಾರವನ್ನು ಮಾಡಿ ನಾವು ಹಳ್ಳಿಗೆ ಹೋಗಲಿಕ್ಕೆ ಹೊರಟೆವು; ಮುಂಜಾನೆ ಎದ್ದು ನಾವು ನಮ್ಮ ಫಲಾರವನ್ನು ಮಾಡಿ ಹಳ್ಳಿಗೆ ಹೋಗಲಿಕ್ಕೆ ಹೊರಟೆವು.

ತಪ್ಪು

(ಅ) ನಾನು ನನ್ನ ಪರೀಕ್ಷೆಯ ಕಾಗದವನ್ನು ನನ್ನ ಶಿಕ್ಷಕನಿಗೆ ಹೇಳಿದೆನು; ನಾನು ನನ್ನ ಶಿಕ್ಷಕನಿಗೆ ಪರೀಕ್ಷೆಯ ಕಾಗದವನ್ನು ನೋಡಲಿಕ್ಕೆ ಹೇಳಿದೆನು; ಹೇಳಿದೆನು ನನ್ನ ಪರೀಕ್ಷೆಯ ಕಾಗದವನ್ನು ಶಿಕ್ಷಕನಿಗೆ ನೋಡಲಿಕ್ಕೆ.

(ಬ) ಯಜಮಾನನ ಶೂರತನದಿಂದ ತನ್ನ ಚಲೋ ನಾಯಿಯು ರಕ್ಷಣವನ್ನು ಮಾಡುತ್ತದೆ; ನಾಯಿಯು ಯಜಮಾನನ ರಕ್ಷಣವನ್ನು ಚಲೋ ತನ್ನ ಶೂರತನದಿಂದ ಮಾಡುತ್ತದೆ; ಮಾಡುತ್ತದೆ ಯಜಮಾನನ ರಕ್ಷಣವನ್ನು ನಾಯಿಯು ಚಲೋ ತನ್ನ ಶೂರತನದಿಂದ.

(ಕ) ನಮ್ಮ ಫಲಾರವನ್ನು ನಾವು ಹಳ್ಳಿಗೆ; ನಾವು ಎದ್ದು ನಮ್ಮ ಫಲಾರವನ್ನು ಮಾಡಿ ಹೋಗಲಿಕ್ಕೆ ಮುಂಜಾನೆ ಹಳ್ಳಿಗೆ ಹೊರಟೆವು; ನಾವು ಮುಂಜಾನೆ ಎದ್ದು ಫಲಾರವನ್ನು ಮಾಡಿ ಹಳ್ಳಿಗೆ ಹೋಗಲಿಕ್ಕೆ ಹೊರಟೆವು; ಮುಂಜಾನೆ ಎದ್ದು ನಮ್ಮ ಫಲಾರವನ್ನು ಮಾಡಿ; ನಾವು ಮುಂಜಾನೆ ಎದ್ದು ನಮ್ಮ ಫಲಾರವನ್ನು ಮಾಡಿ ಹಳ್ಳಿಗೆ ಹೊರಟೆವು; ಹಳ್ಳಿಗೆ ನಾವು ಹೋಗಲಿಕ್ಕೆ ಮುಂಜಾನೆ ಎದ್ದು ಫಲಾರವನ್ನು ಮಾಡಿ ಹೊರಟೆವು.

**ಪ್ರಶ್ನೆ ೩.**—ಬಾಯಿಲೆಖ್ಖಗಳು (೩ರಲ್ಲಿ ೨. ಪ್ರತಿಯೊಂದಕ್ಕೆ ೧ ಮಿನೀಟು).

ಕೆಳಗೆ ತೋರಿಸಿದ ಬಾಯಿಲೆಖ್ಖದ ಉದಾಹರಣೆಗಳನ್ನು ಛಾಪಿಸಿದ ಕಾರ್ಡನ್ನು ಉಪಯೋಗಿಸಬೇಕು—

(ಅ) ೨ ಪೇನಸಿಲುಗಳ ಬೆಲೆ ೫ ಆಣೆ ಅದೆ; ಆದರೆ ೫೦ ಆಣೆಗಳಿಗೆ ಎಷ್ಟು ಪೇನಸಿಲು ಸಿಗುವವು ?

(ಬ) ಒಬ್ಬ ಮನುಷ್ಯನ ಪ್ರತಿವಾರದ ಸಂಬಳವು ೨೦ ರೂಪಾಯಿ ಅದೆ ಮತ್ತು ಪ್ರತಿವಾರದ ವೆಚ್ಚವು ೧೪ ರೂಪಾಯಿ ಅದೆ. ಆದರೆ ಅವನು ೩೦೦ ರೂಪಾಯಿ ಉಳಿಸಬೇಕಾದರೆ ಎಷ್ಟು ಕಾಲವು ಹಿಡಿಯುವದು ?

(ಕ) ಪ್ರತಿ ಯಾರ್ಡ ಅರಿವೆಗೆ ೧೫ ಆಣೆಯಂತೆ ೭ ಫೂಟು ಅರಿವೆಗೆ ಏನು ಬೀಳುವುದು ?

ಕಾರ್ಡನ್ನು ಹುಡುಗನ ಎದುರಿಗೆ ಇಡಬೇಕು. ಮತ್ತು ಮೊದಲನೇ ಲೆಖ್ಖವನ್ನು ಬಿಟ್ಟು ಉಳಿದವುಗಳನ್ನು ಮುಚ್ಚಿ ಇಡಬೇಕು. ಮೊದಲನೇ ಲೆಖ್ಖವನ್ನು ತೋರಿಸಿ ಕೆಳಗಿನಂತೆ ಅನ್ನಬೇಕು—

"ಇದನ್ನು ಘಟ್ಟಿಯಾಗಿ ಓದು."

ಯಾವದೇ ಶಬ್ದವನ್ನು ಹುಡುಗನಿಗೆ ಓದಲಿಕ್ಕೆ ಬಾರದಿದ್ದರೆ ಅವನಿಗೆ ಹೇಳಬೇಕು. ಹುಡುಗನು ಓದುವದು ಮುಗಿದ ಮೇಲೆ—

"ಈಗ ಇದರ ಉತ್ತರ ಹೇಳು" ಎಂದು ಅನ್ನಬೇಕು.

ಹುಡುಗನು ಸೀಸಪೇನು ಅಥವಾ ಕಾಗದವನ್ನು ಉಪಯೋಗಿಸ ಬಾರದು ಮತ್ತು ಒಂದು ಮಿನೀಟಿನೊಳಗೆ ಉತ್ತರವನ್ನು ಕೊಡಬೇಕು.

ಪಾಸಾಗಬೇಕಾದರೆ ಮೂರರಲ್ಲಿ ಎರಡು ಲೆಖ್ಖಗಳು ಸರಿ ಇರಬೇಕು. ರೀತಿ ಸರಿ ಇದ್ದು ಉತ್ತರ ತಪ್ಪಿದರೆ ಉಪಯೋಗವಿಲ್ಲ. ಎರಡನೇ ಸಾರಿ ಪ್ರಯತ್ನಮಾಡಲಿಕ್ಕೆ ಬರುವದಿಲ್ಲ. ವೇಳೆಯು ಮೀರದಿದ್ದರೆ ಹುಡುಗನು ತನ್ನಷ್ಟಕ್ಕೆ ತಾನೇ ತಪ್ಪು ತಿದ್ದಿಕೊಂಡರೆ ಅಡ್ಡಿ ಇಲ್ಲ. ಉತ್ತರವು ಮೇಲಿನ ತರಗತಿಯ ರೂಪದಲ್ಲಿ, ಉದಾಹರಣಾರ್ಥವಾಗಿ, ಆಣೆಗಳನ್ನು ರೂಪಾಯಿಗಳನ್ನು ಮಾಡಿ, ಹೇಳದಿದ್ದರೂ ನಡಿಯುತ್ತದೆ.

**ಪ್ರಶ್ನೆ ೪.**—ಬಂದರ ಹೊಟ್ಟೆಯೊಳಗೆ ಒಂದು ಇದ್ದಂಥ ಪೆಟ್ಟಿಗೆಗಳ ಲೆಖ್ಖ (೪ರಲ್ಲಿ ೩. ಪ್ರತಿಯೊಂದಕ್ಕೆ $\frac{?}{?}$ ಮಿನೀಟು).

ಲೆಖ್ಖಗಳ ವಿವರ—

ಒಂದು ದೊಡ್ಡ ಪೆಟ್ಟಿಗೆ ಮತ್ತು ಅದರೊಳಗೆ—

(ಅ) ಎರಡು ಸಣ್ಣ ಪೆಟ್ಟಿಗೆಗಳು ಮತ್ತು ಈ ಪ್ರತಿಯೊಂದು ಪೆಟ್ಟಿಗೆಯೊಳಗೆ ಒಂದೊಂದು ತೀರ ಸಣ್ಣ ಪೆಟ್ಟಿಗೆ.

(ಬ) ಎರಡು ಸಣ್ಣ ಪೆಟ್ಟಿಗೆಗಳು ಮತ್ತು ಈ ಪ್ರತಿಯೊಂದರೊಳಗೆ ಎರಡೆರಡು ತೀರ ಸಣ್ಣ ಪೆಟ್ಟಿಗೆಗಳು.

(ಕ) ಮೂರು ಸಣ್ಣ ಪೆಟ್ಟಿಗೆಗಳು, ಮತ್ತು ಈ ಪ್ರತಿಯೊಂದರೊಳಗೆ ಮೂರು ಮೂರು ತೀರ ಸಣ್ಣ ಪೆಟ್ಟಿಗೆಗಳು.

(ಡ) ನಾಲ್ಕು ಸಣ್ಣ ಪೆಟ್ಟಿಗೆಗಳು, ಮತ್ತು ಈ ಪ್ರತಿಯೊಂದರೊಳಗೆ ನಾಲ್ಕು ನಾಲ್ಕು ತೀರ ಸಣ್ಣ ಪೆಟ್ಟಿಗೆಗಳು.

ಹುಡುಗನಿಗೆ ಒಂದು ಸಣ್ಣ ಸುಮಾರು ೩ ಇಂಚು ಉದ್ದ, ೨ ಇಂಚು ಅಗಲ ಮತ್ತು ೧ ಇಂಚು ಎತ್ತರವಿದ್ದಂಥ ಒಂದು ರಟ್ಟಿನ ಪೆಟ್ಟಿಗೆಯನ್ನು ಅದರ ಮುಚ್ಚಳ ತೆಗೆಯದೆ ತೋರಿಸಬೇಕು ಮತ್ತು ಕೆಳಗಿನಂತೆ ಅನ್ನಬೇಕು—

"ನಿನಗೆ ಈ ಪೆಟ್ಟಿಗೆ ಕಾಣಿಸುತ್ತದೆ; ಇದರೊಳಗೆ ಎರಡು ಸಣ್ಣ ಪೆಟ್ಟಿಗೆ ಅವೆ. ಮತ್ತು ಈ ಪ್ರತಿಯೊಂದು ಸಣ್ಣ ಪೆಟ್ಟಿಗೆಯೊಳಗೆ ತಿರುಗಿ ತೀರ ಸಣ್ಣ ಒಂದೊಂದು ಪೆಟ್ಟಿಗೆ ಅದೆ. ಆದರೆ ದೊಡ್ಡ ಪೆಟ್ಟಿಗೆ ಹಿಡಿದು ಎಲ್ಲ ಕೂಡಿ ಎಷ್ಟು ಪೆಟ್ಟಿಗೆಗಳಾದವು? ಮೊದಲು ದೊಡ್ಡದೊಂದು ಪೆಟ್ಟಿಗೆ, ಇದರೊಳಗೆ ಎರಡು ಸಣ್ಣ ಪೆಟ್ಟಿಗೆಗಳು ಮತ್ತು ಕಡೆಗೆ ಈ ಪ್ರತಿಯೊಂದು ಪೆಟ್ಟಿಗೆಯೊಳಗೆ ಒಂದೊಂದು ತೀರ ಸಣ್ಣ ಪೆಟ್ಟಿಗೆ. ಎಲ್ಲ ಕೂಡಿ ಎಷ್ಟು ಆದವು?"

ಎರಡನೇ ಸಾರಿ ಕೆಳಗಿನಂತೆ ಅನ್ನಬೇಕು—

"ಈಗ ಇದರೊಳಗೆ ಎರಡು ಸಣ್ಣ ಪೆಟ್ಟಿಗೆಗಳು ಅವೆ ಎಂದು ತಿಳಿದುಕೊ; ಮತ್ತು ಈ ಪ್ರತಿಯೊಂದು ಸಣ್ಣ ಪೆಟ್ಟಿಗೆಯೊಳಗೆ ಎರಡೆರಡು ತೀರ ಸಣ್ಣ ಪೆಟ್ಟಿಗೆಗಳಿವೆ. ಹೀಗಾದರೆ, ಒಟ್ಟು ಎಷ್ಟು ಪೆಟ್ಟಿಗೆಗಳಾದವು? ನೆನಪಿನಲ್ಲಿಟ್ಟುಕೊ; ಮೊದಲು ದೊಡ್ಡ ಪೆಟ್ಟಿಗೆ, ಆನಂತರ ಎರಡು ಸಣ್ಣ ಪೆಟ್ಟಿಗೆಗಳು ಮತ್ತು ಈ ಪ್ರತಿಯೊಂದು ಸಣ್ಣ ಪೆಟ್ಟಿಗೆಯೊಳಗೆ ಎರಡೆರಡು ತೀರ ಸಣ್ಣ ಪೆಟ್ಟಿಗೆಗಳು."

ಇದೇ ಮೇರೆಗೆ ಮೂರನೇ ಸಾರಿ ಹೀಗೆ ಅನ್ನಬೇಕು—

"ಮೂರು ಸಣ್ಣ ಪೆಟ್ಟಿಗೆಗಳು ಮತ್ತು ಈ ಪ್ರತಿಯೊಂದು ಪೆಟ್ಟಿಗೆಯೊಳಗೆ ಮೂರು ಮೂರು ತೀರ ಸಣ್ಣ ಪೆಟ್ಟಿಗೆಗಳು."

ನಾಲ್ಕನೇ ಸಾರಿ ಹೀಗೆ ಅನ್ನಬೇಕು—

"ನಾಲ್ಕು ಸಣ್ಣ ಪೆಟ್ಟಿಗೆಗಳು ಮತ್ತು ಈ ಪ್ರತಿಯೊಂದು ಸಣ್ಣ ಪೆಟ್ಟಿಗೆಯೊಳಗೆ ನಾಲ್ಕು ನಾಲ್ಕು ತೀರ ಸಣ್ಣ ಪೆಟ್ಟಿಗೆಗಳು."

ಈ ಲೆಖ್ಖವನ್ನು ಬಾಯಿಯಿಂದ ಕೇಳಬೇಕು ಮತ್ತು ಹುಡುಗನು ಇದರ ಉತ್ತರವನ್ನು ಕಾಗದ ಪೇನಸಿಲುಗಳಿಲ್ಲದೆ ಬಾಯಿಯಿಂದಲೇ ಹೇಳಬೇಕು.

**ಪ್ರಶ್ನೆ ೫.**—ಮೂರು ವಸ್ತುಗಳೊಳಗಿನ ಸಾಮ್ಯವನ್ನು ತೋರಿಸುವದು (೫ರಲ್ಲಿ ೩. ಪ್ರತಿಯೊಂದಕ್ಕೆ ೧ ಮಿನೀಟು).

ಈ ವರ್ಷದಲ್ಲಿ ಸಾಮ್ಯವನ್ನು ತೋರಿಸಲಿಕ್ಕೆ ಕೆಳಗಿನ ಶಬ್ದಗಳನ್ನು ಕೊಡಬೇಕು—

(ಅ) ಉಣ್ಣೆ, ಹತ್ತಿ, ರೇಶಿಮೆ.

(ಬ) ಹಾವು, ಆಕಳು, ಗುಬ್ಬಿ.

(ಕ) ಪುಸ್ತಕ, ಶಿಕ್ಷಕ, ವರ್ತಮಾನಪತ್ರ.

(ಡ) ಕತ್ತರಿ, ಬಿಲ್ಲಿ, ತಂತಿಯ ತುಂಡು.

(ಈ) ಗುಲಾಬಿಹೂವು, ಬಟಾಟೆ, ಗಿಡ.

(ವರ್ಷ ೯, ಪ್ರಶ್ನೆ ೩ ನೋಡಿರಿ.)

ಮೊದಲನೇ ಸಾರಿ "ನಾನು ಈಗ ಕೆಲವು ರೀತಿಯಿಂದ ಸಮ ಇರುವಂಥ—"ಮುಂತಾದ ಉದ್ದಿಷ್ಟವಾದ ಮಾತುಗಳನ್ನು ಪೂರ್ಣ ಅನ್ನಬೇಕು.

ಉಳಿದ ಶಬ್ದಗಳ ಕೂಡ ಕೆಳಗಿನಂತೆ ಅನ್ನಬೇಕು—

"— — — ಇವು ಮೂರೂ ಯಾವ ರೀತಿಯಿಂದ ಸಮ ಅವೆ?"

ಒಮ್ಮೊಮ್ಮೆ ಹುಡುಗನು ಇವು ಸಮ ಇಲ್ಲ ಎಂದು ಹೇಳಿ ಸುಮ್ಮನೆ ಕೂಡ್ರುತ್ತಾನೆ. ಆವಾಗ್ಗೆ ಕೆಳಗಿನಂತೆ ಅನ್ನಬೇಕು—

"ಇವು ಮೂರೂ ಸಮ ಅವೆ. ಯಾವ ರೀತಿಯಿಂದ ಸಮ ಅವೆ, ಹೇಳು."

ಎಷ್ಟೋ ಹುಡುಗರು—"ಇವು ಮೂರೂ ನಮಗೆ ಉಪಯೋಗಕ್ಕೆ

ಬೀಳುತ್ತವೆ " ಎಂದು ಸಾಮ್ಯವನ್ನು ಕೊಡುತ್ತಾರೆ. ಆವಾಗ್ಗೆ ಕೆಳಗಿನಂತೆ ಅನ್ನಬೇಕು—

" ಇವು ಎಲ್ಲ ಯಾವ ರೀತಿಯಿಂದ ಉಪಯೋಗಕ್ಕೆ ಬೀಳುತ್ತವೆ? "

ಯಾವದೇ ರೀತಿಯಿಂದ ಸರಿಯಾದ ಸಾಮ್ಯವನ್ನು ತೋರಿಸಿದರೆ ಸಾಕು.

ಹುಡುಗರ ಉತ್ತರಗಳು—

ಸಮ

(ಅ) ಅದರಿಂದ ಅರಿವೆಗಳನ್ನು ಮಾಡುತ್ತಾರೆ; ಬಟ್ಟೆ ಮಾಡುತ್ತಾರೆ; ಮೂರೂ ಮಿದು ಇರುತ್ತವೆ; ಅಷ್ಟೂದರಿಂದ ಎಳೆ ತೆಗೆದು ಅರಿವೆ ಮಾಡುತ್ತಾರೆ; ಮೂರೂ ದಾರ ತೆಗೆಯಲಿಕ್ಕೆ ಬರುತ್ತವೆ; ಮೂರೂ ವಸ್ತ್ರ ಈ ರೀತಿಯಿಂದ ಉಪಯೋಗ ಆಗುತ್ತದೆ.

(ಬ) ಮೂರನ್ನೂ ಮನುಷ್ಯರು ಸಾಕುತ್ತಾರೆ; ಮೂರೂ ಪ್ರಾಣಿಗಳ ಪೈಕಿ ಬರುತ್ತವೆ; ಮೂರೂ ಮೂಕ ಪ್ರಾಣಿಗಳು; ಎಲ್ಲ ಆಹಾರ ತಿನ್ನುತ್ತವೆ; ಪ್ರಾಣಿ ಎಂದು ಸಮ ಆಗುತ್ತವೆ; ಎರಡು ಕಣ್ಣು ಇರುತ್ತವೆ; ಅದಕ್ಕೂ ಜೀವ ಅದೆ ಇದಕ್ಕೂ ಜೀವ ಅದೆ.

(ಕ) ಮೂರೂ ನೋಡಿದರೆ ಜ್ಞಾನ ಬರುತ್ತದೆ; ಮೂರೂದರಿಂದ ನಾವು ಕೆಲವು ಜ್ಞಾನ ಸಂಪಾದಿಸುತ್ತೇವೆ; ಮೂರೂ ಕೆಲವು ಸಂಗತಿಗಳನ್ನು ಸಮಗೆ ಕಲಿಸುತ್ತವೆ; ಇವು ಮಾಹಿತಿ ಕೊಡುತ್ತವೆ; ಪುಸ್ತಕದಿಂದಲೂ ಕೆಲವು ಸಂಗತಿ ತಿಳಿಯುತ್ತವೆ, ಶಿಕ್ಷಕನಿಂದಲೂ.ಸಂಗತಿ ತಿಳಿಯುತ್ತವೆ, ವರ್ತಮಾನಪತ್ರದಿಂದಲೂ ಸಂಗತಿ ತಿಳಿಯುತ್ತವೆ; ಮೂರೂ ತಿಳಿಯುವವು ಆಗುತ್ತವೆ; ಮೂರೂ ಪರರಿಗೆ ಸಂಗತಿಯನ್ನು ಹೇಳುತ್ತವೆ; ಮೂರೂ ಮನುಷ್ಯನಿಗೆ ಏನಾದರೂ ಪಾಠ ಹೇಳುತ್ತವೆ; ಬುದ್ಧಿಮಾತು ಹೇಳುತ್ತವೆ.

(ಡ) ಮೂರೂ ಧಾತುಗಳು ಅವೆ; ಮೂರೂ ಧಾತುವಿನಿಂದ ಮಾಡಿರುತ್ತಾರೆ; ಬಹಳ ಘಟ್ಟಿ ಇರುತ್ತವೆ; ಮೂರೂ ನೆಲದಿಂದ ತೆಗೆಯುತ್ತಾರೆ; ಧಾತುಗಳೊಳಗೆ ಬಂದೇ ಬರುತ್ತವೆ.

(ಈ) ಮೂರೂ ನೆಲದೊಳಗೆ ಬೆಳೆಯುತ್ತವೆ; ಮೂರೂ ಗಿಡಗಳ ಪೈಕಿ

ಬರುತ್ತವೆ; ಮೂರೂ ಬೆಳೆಯುತ್ತವೆ; ಎಲ್ಲಕ್ಕೂ ನೀರು ಬೇಕು; ಬೀಜ ದಿಂದ ಹುಟ್ಟುತ್ತವೆ; ಅವೆಲ್ಲ ಗಿಡಗಳಿಂದ ಆಗುತ್ತವೆ.

ತಪ್ಪು

(ಅ) ಮೂರೂ ಒಬ್ಬವನಿಗೆ ಬೇಕಾಗುತ್ತವೆ; ಇವು ಮೂರೂ ಮನುಷ್ಯನಿಗೆ ಬೇಕೇ ಬೇಕು; ಕುರಿಯಿಂದ ಉಣ್ಣೆ ರೇಶಿಮೆ ಆಗುತ್ತದೆ.

(ಬ) ಆಕಳಿಗೆ ಹಾವು ಕಡಿದರೆ ಗುಬ್ಬಿ ಕಡಿದು ಕಡಿದು ಬಿಡಿಸುತ್ತದೆ; ಹಾವಿನದು ಪೂಜೆ ಮಾಡುತ್ತಾರೆ ಆಕಳದು ಪೂಜೆ ಮಾಡುತ್ತಾರೆ; ಸಭ್ಯ ಪ್ರಾಣಿಗಳು ಮೂರೂ ಊರೊಳಗೆ ಇರುವವು; ಆಕಳಿಗೆ ಹಾವು ಕಡಿಯುತ್ತದೆ.

(ಕ) ಶಿಕ್ಷಕನಿಂದ ಪುಸ್ತಕ ಓದಲಿಕ್ಕೆ ಬರುತ್ತದೆ; ಶಿಕ್ಷಕನು ವರ್ತಮಾನಪತ್ರ ಪುಸ್ತಕಗಳೊಳಗಿಂದ ನೋಡಿ ಹೇಳುತ್ತಾನೆ; ಶಿಕ್ಷಕನಿಗೆ ಪುಸ್ತಕ ಬೇಕಾಗುತ್ತದೆ; ಎಲ್ಲದರಿಂದ ನಮಗೆ ಅಭ್ಯಾಸದ ಗುರ್ತು ಆಗುತ್ತದೆ; ಪುಸ್ತಕ ಮತ್ತು ವರ್ತಮಾನಪತ್ರದೊಳಗೆ ಬರೆದಿರುತ್ತದೆ ಶಿಕ್ಷಕನು ಓದುತ್ತಾನೆ; ಪುಸ್ತಕ ಮತ್ತು ವರ್ತಮಾನಪತ್ರಗಳನ್ನು ಶಿಕ್ಷಕನು ಓದುತ್ತಾನೆ.

(ಡ) ಮೂರೂ ಒಂದೇ ತರದ ಧಾತುವಿನಿಂದ ಮಾಡಿರುತ್ತವೆ; ಬಿಲ್ಲಿ ಕೊಟ್ಟರೆ ತಂತಿ ಬರುತ್ತದೆ ತಂತಿ ಉಪಯೋಗಮಾಡಬೇಕಾದರೆ ಕತ್ತರಿ ಬೇಕಾಗುತ್ತದೆ; ಮೂರೂ ಪಡಿಯುಚ್ಚಿನೊಳಗೆ ಹಾಕಿ ಮಾಡುತ್ತಾರೆ; ಉಪಯೋಗಕ್ಕೆ ಬರುತ್ತವೆ; ಒಂದೇ ಧಾತು, ತಂತಿಯು ತುಂಡಿನಿಂದ ದುಡ್ಡು ಮಾಡಲಿಕ್ಕೆ ಬರುತ್ತದೆ; ಧಾತು ಒಂದೇ ತರದ್ದು ಇರುತ್ತದೆ; ಮೂರೂ ಮನುಷ್ಯನಿಗೆ ಉಪಯೋಗವುಳ್ಳ ಪದಾರ್ಥಗಳು.

(ಈ) ಉಪಯೋಗಕ್ಕೆ ಬೀಳುತ್ತದೆ; ಗಿಡ ಇಲ್ಲದಿದ್ದರೆ ಬಟಾಟೆ ಬರುವದಿಲ್ಲ; ಹೂವು ಬರುವುದಿಲ್ಲ; ಬೀಜದಿಂದ ಗಿಡ ಆಗುತ್ತದೆ; ಗಿಡದಿಂದ ಹೂವು ಆಗುತ್ತದೆ; ಗುಲಾಬೀ ಹೂವು ಬೇಕಾಗಿದ್ದರೆ ಗಿಡ ಬೇಕು; ವಾಸನೆ; ತಿನ್ನಲಿಕ್ಕೆ.

**ಪ್ರಶ್ನೆ ೬.**—ಚಂಡು ಮತ್ತು ಬೈಲು—ಮೇಲಿನ ತರಗತಿ.

(ವರ್ಷ ೮, ವೈಕಲ್ಪಿಕ ಪ್ರಶ್ನೆ ೨ರಂತೆ.)

ಉತ್ತರಗಳನ್ನು ತಪಾಸಿಸುವ ಮುಂದೆ ಉತ್ತರಗಳ ಮಾದರಿಯ ಕಾರ್ಡನ್ನು ನೋಡಬೇಕು.

**ವೈಕಲ್ಪಿಕ ಪ್ರಶ್ನೆ.**—ಶಬ್ದಕೋಶ—೪೦ ಶಬ್ದಗಳು (ಒಟ್ಟು ೨೮,೦೦೦ ಶಬ್ದಗಳಲ್ಲಿ ೧೧,೨೦೦ ಶಬ್ದಗಳು).

(ವರ್ಷ ೯, ವೈಕಲ್ಪಿಕ ಪ್ರಶ್ನೆಯಂತೆ.)

## ವರ್ಷ ೧೬

**ಪ್ರಶ್ನೆ ೧.**—ನೀತಿಕಥೆಗಳ ಸಾರವನ್ನು ಹೇಳುವದು—೮ ಗುಣಗಳು. (ವರ್ಷ ೧೨, ಪ್ರಶ್ನೆ ೫ ನೋಡಿರಿ.)

**ಪ್ರಶ್ನೆ ೨.**—ಘಡಿಯಾಳದ ಮುಳ್ಳುಗಳನ್ನು ತಿರುವು ಮುರುವು ಮಾಡುವದು (೩ರಲ್ಲಿ ೨. ತಪ್ಪು ೩ ಮಿನೀಟಿಗಿಂತ ಹೆಚ್ಚು ಇರಬಾರದು. ವೇಳೆಯ ಅವಧಿ ೧ ಮಿನೀಟು).

ಪ್ರಶ್ನೆ ಕೇಳುವದಕ್ಕಿಂತ ಮುಂಚೆ ಹುಡುಗನ ಎದುರಿಗೆ ಘಡಿಯಾಳ ಅಥವಾ ವಾಚ ಇಲ್ಲದ ಹಾಗೆ ಮಾಡಬೇಕು. ಮುಂದೆ ಕೆಳಗಿನಂತೆ ಅನ್ನಬೇಕು—

“ಈಗ ೬-೨೨ ಅಂದರೆ ೬ ಹೊಡೆದು ೨೨ ಮಿನೀಟು ಆಗಿದೆ ಎಂದು ತಿಳಿ. ಆವಾಗ್ಗೆ ದೊಡ್ಡ ಮುಳ್ಳು ಎಲ್ಲಿ ಇರಬಹುದು ಮತ್ತು ಸಣ್ಣ ಮುಳ್ಳು ಎಲ್ಲಿ ಇರಬಹುದು ಎಂಬದು ನಿನ್ನ ಮನಸ್ಸಿನಲ್ಲಿ ಬರುತ್ತದಲ್ಲ? ಈಗ ಈ ಎರಡೂ ಮುಳ್ಳುಗಳು ತಮ್ಮ ಸ್ಥಳಗಳನ್ನು ಅದಲುಬದಲು ಮಾಡಿಕೊಂಡವೆಂದು ತಿಳಿ; ಅಂದರೆ ದೊಡ್ಡ ಮುಳ್ಳು ಸಣ್ಣ ಮುಳ್ಳಿದ್ದಲ್ಲಿ ಹೋಯಿತು ಮತ್ತು ಸಣ್ಣ ಮುಳ್ಳು ದೊಡ್ಡ ಮುಳ್ಳಿದ್ದಲ್ಲಿ ಹೋಯಿತು ಎಂದು ತಿಳಿ. ಹಾಗಾದರೆ, ವೇಳೆಯು ಎಷ್ಟು ಆಗಿರಬೇಕು?”

ಇದೇ ಮೇರೆಗೆ ೧೧-೧೦ ಮತ್ತು ೨-೪೬—ಇವುಗಳ ವಿಷಯಕ್ಕೆ ಕೇಳಬೇಕು.

ಮೊದಲನೇ ಉದಾಹರಣೆಯ ಉತ್ತರವು ೪-೩೦ ಮತ್ತು ೪-೩೫—ಇವುಗಳ ನಡುವೆ ಇರಬೇಕು; ಎರಡನೇ ಉದಾಹರಣೆಯದು ೧-೫೩ ಮತ್ತು ೧-೫೮ ಇವುಗಳ ನಡುವೆ ಮತ್ತು ಮೂರನೆಯದು ೯-೧೦ ಮತ್ತು ೯-೧೫ ಇವುಗಳ ನಡುವೆ ಇರಬೇಕು.

ಬಹುಶಃ ಈ ವಯಸ್ಸಿನ ಹುಡುಗರಿಗೆ ಘಡಿಯಾಳ ಮತ್ತು ವಾಚನ್ನು ತಿಳಿದುಕೊಳ್ಳಲಿಕ್ಕೆ ಬರುತ್ತದೆ. ಸಂಶಯ ಬಂದರೆ ಹುಡುಗನಿಗೆ ನಿಮ್ಮ ವಾಚನ್ನು ತೋರಿಸಿ ನಮವಾಗಿ ತಿಳಿದುಕೊಳ್ಳುವನೋ ನೋಡಬೇಕು.

ಅವನಿಗೆ ತಿಳಿದುಕೊಳ್ಳಲಿಕ್ಕೆ ಬರುವದಿಲ್ಲ ಎಂದು ಕಂಡುಬಂದರೆ ಈ ಪ್ರಶ್ನೆಯನ್ನು ಬಿಟ್ಟು ಇದರ ಬದಲಾಗಿ ವೈಕಲ್ಪಿಕ ಪ್ರಶ್ನೆಗಳಲ್ಲಿ ಒಂದನ್ನು ಕೇಳಬೇಕು.

**ಪ್ರಶ್ನೆ ೩.**—ಒಂದು ಊರಿನ ಪಾಟೀಲ (ಗೌಡ) ಮತ್ತು ಕುಲಕರ್ಣಿ—ಇವರೊಳಗಿನ ಭೇದಗಳನ್ನು ಹೇಳುವದು (೪ರಲ್ಲಿ ೨. ಬೇಕಾದ ರೂಪದಲ್ಲಿ—೧. ಬರೆಯುವ ಕೆಲಸ ; ೨. ತಂಟೆಗಳನ್ನು ನಿವಾರಿಸುವದು ಅಥವಾ ಊರಿನ ಬಂದೋಬಸ್ತನ್ನು ಇಡುವದು ; ೩. ಅಧಿಕಾರ ; ೪. ನೇಮಣೂಕು ಮತ್ತು ಅದರ ಮರ್ಯಾದೆ).

"ನಿನಗೆ ಒಂದು ಊರಿನ ಪಾಟೀಲ (ಗೌಡ) ಅಂದರೆ ಗೊತ್ತದೆ; ಮತ್ತು ಕುಲಕರ್ಣಿ (ಶಾನುಭೋಗ) ಅಂದರೂ ಗೊತ್ತದೆ. ಈಗ ಇವರೊಳಗಿನ ನಿನಗೆ ಗೊತ್ತಿದ್ದಂಥ ಮುಖ್ಯ ಭೇದಗಳನ್ನು ಹೇಳು."

ಹುಡುಗನು ಒಂದೆರಡು ಭೇದಗಳನ್ನು ಅಥವಾ ಕೆಲವು ಮಹತ್ವವಿಲ್ಲದ ಭೇದಗಳನ್ನು ಹೇಳಿ ನಿಂತುಬಿಟ್ಟರೆ, ಮುಂದೆ ಕೆಳಗಿನಂತೆ ಅನ್ನಬೇಕು—

"ಬೇಕಾದ ಹಾಗೆ ಹೆಚ್ಚು ಕಡಿಮೆಯನ್ನು ಕೊಟ್ಟರೂ ಬರುತ್ತದೆ. ನಿನಗೆ ಗೊತ್ತಿದ್ದನ್ನೆಲ್ಲ ಹೇಳು."

ಕೆಳಗಿನ ನಾಲ್ಕು ಸಂಗತಿಗಳಲ್ಲಿ ಬೇಕಾದ ಎರಡು ಸಂಗತಿಗಳನ್ನು ಬೇಕಾದ ರೂಪದಲ್ಲಿ ಅಥವಾ ಒಂದರೊಳಗೆ ಒಂದು ಮಿಶ್ರಿತವಾದ ಹಾಗೆ ಹೇಳಿದರೂ ನಡಿಯುತ್ತದೆ.

| ಪಾಟೀಲ (ಗೌಡ) | ಕುಲಕರ್ಣಿ (ಶಾನುಭೋಗ) |
|---|---|
| ೧. ಬರೆಯುವ ಅಥವಾ ಲೆಖ್ಖದ ಕೆಲಸ ಇರುವದಿಲ್ಲ. | ೧. ಬರೆಯುವ ಅಥವಾ ಲೆಖ್ಖದ ಕೆಲಸ ಇರುತ್ತದೆ. |
| ೨. ತಂಟೆಯ ವಿಚಾರಣೆಯ ಕೆಲಸ ಅಥವಾ ಊರಿನ ಬಂದೋಬಸ್ತಿನ ಕೆಲಸ ಇರುತ್ತದೆ. | ೨. ಇಂಥ ಕೆಲಸ ಇರುವದಿಲ್ಲ. |
| ೩. ಮೇಲಿನ ಅಧಿಕಾರಿ (ಅಧಿಕಾರ ಹೆಚ್ಚು ಇರುತ್ತದೆ). | ೩. ಪಾಟೀಲನ ಕೈಕೆಳಗಿನವನು (ಅಧಿಕಾರ ಕಡಿಮೆ). |
| ೪. ಹೆಚ್ಚಿನ ಓದುಬರಹ ಬೇಕಾಗಿರುವದಿಲ್ಲ. ಬಹುಶಃ ಈ ಹುದ್ದೆಯು ಪೂರ್ವಾರ್ಜಿತ ಇರುತ್ತದೆ. | ೪. ಬಹುಶಃ ಓದುಬರಹದ ಪರೀಕ್ಷೆ ಪಾಸಾಗಬೇಕಾಗುತ್ತದೆ. ಈ ಹುದ್ದೆ ಪೂರ್ವಾರ್ಜಿತ ಇರುವದು ಕಡಿಮೆ. |

ದೇಶಕ್ಕೆ ಅಥವಾ ಸ್ಥಳಕ್ಕೆ ಅನುಸರಿಸಿ ಇವುಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇರಬಹುದು. ಗುಣಗಳನ್ನು ಕೊಡುವಾಗ ಇವುಗಳನ್ನು ಲಕ್ಷ್ಯದಲ್ಲಿಡಬೇಕು.

ಹುಡುಗರ ಉತ್ತರಗಳು—

ಸಮ

(೧) ಗೌಡನು ಊರೊಳಗೆ ವ್ಯವಸ್ಥೆ ನೋಡುವದು, ಕುಲಕರ್ಣಿಯು ಬರೇ ಬರೆಯುವದು ಲೆಖ್ಖಪತ್ರ ಇಡುವದು; ಗೌಡನ ಕೆಲಸ ಹಪ್ತೆ ವಸೂಲ ಮಾಡುವದು, ಗಸ್ತಿ ತಿರುಗುವದು. (೨) ಗೌಡನು ವಾಲೀಕಾರನಿಗೆ ತಕ್ಕೊಂಡು ಗಸ್ತಿ ತಿರುಗಬೇಕಾಗುತ್ತದೆ; ಕುಲಕರ್ಣಿಯು ಕೂತಲ್ಲೇ ಹಪ್ತೆ ವಸೂಲ ಮಾಡಿ ಸರಕಾರಕ್ಕೆ ಕಳಿಸಬೇಕು; ಗೌಡನಿಗೆ ವತನ ಇರುತ್ತದೆ, ಕುಲಕರ್ಣಿಗೆ ಪೋಟಗಿ ಇರುತ್ತದೆ. (೩) ಗೌಡನು ವ್ಯವಸ್ಥೆ ನೋಡುವದು ಗಸ್ತಿ ತಿರುಗುವದು, ಕುಲಕರ್ಣಿಯು ಗೌಡನ ಕೈಕೆಳಗಿನ ಕಾರಕೂನ ಇದ್ದ ಹಾಗೆ ಚಾವಡಿಯೊಳಗಿನ ಬರೆಯುವ ಕೆಲಸಮಾಡುತ್ತಾನೆ; ಗೌಡನಿಗೆ ಕೆಲವು ಹಕ್ಕು ಇರುತ್ತವೆ—ಶಿಕ್ಷೆ ಕೊಡುವದು, ಕುಲಕರ್ಣಿಗೆ ಇರುವದಿಲ್ಲ; ಗೌಡನದು ಹೆಚ್ಚಿನ ದರ್ಜೆ. (೪) ಗೌಡನು ಜಗಳ ಆದರೆ ನೋಡುವದು, ಕೊಂಡವಾಡೆಯೊಳಗೆ ದನ ನೋಡುವದು, ಹುಟ್ಟಿದ ಸತ್ತವರ ಲೆಖ್ಖ ಇಡಬೇಕು; ಕುಲಕರ್ಣಿಯು ಹಪ್ತೆ ವಸೂಲ ಮಾಡುವದು, ಲೆಖ್ಖಪತ್ರ ಇಡುವದು. (೫) ಗೌಡ ಕಳವು ಆದರೆ ನೋಡುವದು, ಕುಲಕರ್ಣಿ ಹಪ್ತೆ ವಸೂಲ ಮಾಡುವದು; ಗೌಡ ಊರಲ್ಲೇ ಇರುತ್ತಾನೆ, ಕುಲಕರ್ಣಿ ಹಳ್ಳಿ ತಿರುಗಾಡುತ್ತಾನೆ; ಗೌಡನ ದಪ್ತರಗಂಟು ತುಸು ಇರುತ್ತದೆ, ಕುಲಕರ್ಣಿಯದು ಬಹಳ ಇರುತ್ತದೆ; ಗೌಡನು ಗಸ್ತಿ ತಿರುಗಬೇಕಾಗುತ್ತದೆ, ಕುಲಕರ್ಣಿಯು ಬರೆಯುವದು ಮಾಡುತ್ತಾನೆ. (೬) ಗೌಡ ಊರಲ್ಲಿ ಕಳವು ದರೋಡೆ ತಪಾಸ ಮಾಡುವದು, ಕುಲಕರ್ಣಿ ಬರೇ ಕಾಗದಪತ್ರ ಬರೆಯುವ ಕೆಲಸ; ಗೌಡ ಬರೇ ಸಹಿ ಮಾಡುವದು.

## ತಪ್ಪು

(೧) ಗೌಡನು ಊರೊಳಗೆ ಶಾಂತತಾ ನೋಡಬೇಕು, ಕುಲಕರ್ಣಿಯು ಹೊಲದ ರೊಕ್ಕ ತಕ್ಕೊಳ್ಳುತ್ತಾನೆ; ಗೌಡನು ಗುಸ್ತಿಯ ಕೆಲಸ ನೋಡುತ್ತಾನೆ, ಕುಲಕರ್ಣಿಯು ನ್ಯಾಯ ತೀರಿಸಬೇಕು. (೨) ಗೌಡನು ಹೊಲದ ತೆರಿಗೆ ತಕ್ಕೊಂಡು ಕುಲಕರ್ಣಿಯ ಕಡೆಗೆ ಕೊಡುತ್ತಾನೆ; ಗೌಡನು ಒಕ್ಕಲಿಗರ ಹೊಲ ದಿನಾಲು ನೋಡುತ್ತಾನೆ, ಹೊಲದ ಸಲುವಾಗಿ ತಂಟೆ ಆದರೆ ನೋಡುತ್ತಾನೆ; ಕುಲಕರ್ಣಿಯು ತೆರಿಗೆ ಕೊಡದಿದ್ದರೆ ಗೌಡನ ಕಡೆಗೆ ಹೇಳಿಕಳಿಸುತ್ತಾನೆ; ಗೌಡ ಕುಲಕರ್ಣಿ ಹೇಳಿದಷ್ಟು ಕೆಲಸ ಮಾಡುತ್ತಾನೆ. (೩) ಗೌಡನು ಒಂದೇ ಹಳ್ಳಿಗೆ, ಕುಲಕರ್ಣಿಯು ಐದು-ಆರು ಹಳ್ಳಿಗೆ. (೪) ಗೌಡನು ಊರೊಳಗಿನ ಪಟ್ಟಿ ಕೂಡಿಸುತ್ತಾನೆ, ರಸ್ತೆ ದುರಸ್ತ ಮಾಡುವದು, ಕಸಾ ಉಡುಗಿಸುವದು ಮಾಡಿಸುತ್ತಾನೆ, ಕುಲಕರ್ಣಿ—ಜಗಳ ಆದರೆ ಅವನ ಕಡೆಗೆ ಬರುತ್ತವೆ.

**ಪ್ರಶ್ನೆ ೪.**—ಆರು ಅಂಕೆಗಳನ್ನು ತಿರುವು ಮುರುವು ಅನ್ನುವದು (೩ರಲ್ಲ ೧. ಸೆಕಂಡಿಗೆ ಒಂದರಂತೆ ಓದಬೇಕು).

ಕೆಳಗಿನ ಅಂಕಮಾಲೆಗಳನ್ನು ಉಪಯೋಗಿಸಬೇಕು—

೪—೭—೧—೯—೫—೨; ೫—೮—೩—೨—೯—೪; ೭—೫—೨—೬—೩—೮.

(ವರ್ಷ ೭, ಪ್ರಶ್ನೆ ೩; ವರ್ಷ ೯, ಪ್ರಶ್ನೆ ೧; ವರ್ಷ ೧೨, ಪ್ರಶ್ನೆ ೪ ನೋಡಿರಿ.)

**ಪ್ರಶ್ನೆ ೫.**—ಗೂಢ ಪ್ರಶ್ನೆಗಳು (೩ರಲ್ಲಿ ೨. "ಅ" ಮತ್ತು "ಬ" ದ ಮೇಲೆ ವಿಶೇಷ ಮಾಹಿತಿಯನ್ನು ಕೇಳಬಹುದು. ಐದು ಸೆಕಂಡಿನ ಮೇಲೆ ಎರಡನೇ ಸಾರಿ ಓದಿ ತೋರಿಸಬೇಕು. ಉತ್ತರ ಬರಲಿಕ್ಕೆ ೧ ಮಿನೀಟು ಕೊಡಬೇಕು).

ಹುಡುಗನಿಗೆ ಕೆಳಗಿನಂತೆ ಅನ್ನಬೇಕು—

"ಲಕ್ಷ್ಯಗೊಟ್ಟು ಕೇಳು ಮತ್ತು ನಾನು ಏನು ಮಾಡುತ್ತೇನೆ ಅದು ತಿಳಿಯುತ್ತದೆಯೋ, ನೋಡು."

ಮುಂದೆ ಕೆಳಗಿನ ಅವತರಣಗಳನ್ನು ಒಂದರ ಹಿಂದೆ ಒಂದು ಸಾವ

ಕಾಶವಾಗಿ ಅರ್ಥವು ಸ್ಪಷ್ಟ ಆಗುವ ಹಾಗೆ ಮುಖ್ಯ ಶಬ್ದಗಳ ಮೇಲೆ ಆಘಾತ ಕೊಟ್ಟು, ಮೇಲೆ ತೋರಿಸಿದ ಹಾಗೆ ಎರಡು ಸಾರಿ ಓದಿ ತೋರಿಸಬೇಕು.

(ಅ) "ಒಬ್ಬ ಮನುಷ್ಯನು ಈ ಊರ ಹೊರಗಿನ . . . .[1] ಅಡವಿಯೊಳಗಿಂದ ಹೋಗುತ್ತಿರುವಾಗ ಬೆದರಿ ಒಮ್ಮೆಲೆ ನಿಂತುಬಿಟ್ಟನು. ಮುಂದೆ ತೀರ ಸಮೀಪವಿದ್ದಂಥ ಒಬ್ಬ ಪೊಲೀಸ ಸಿಪಾಯಿಯ ಹತ್ತರ ಓಡಿಬಂದು ಅಂದನು—ನಾನು ಇದೇ ಈಗ ಒಂದು ಗಿಡದ ಟೊಂಗೆಯ ಮೇಲೆ ಜೋತು ಬಿದ್ದಂಥ ಒಂದು—ಒಂದು ಏನೋ ನೋಡಿದೆ ಎಂದು ಹೇಳಿದನು. ಅವನು ಏನು ನೋಡಿದೆ ಎಂದು ಹೇಳಿದನು ?"

(ಬ) "ನನ್ನ ನೆರೆಮನೆಗೆ ವಿಲಕ್ಷಣವಾದ ಅಭ್ಯಾಗತರು (ಅತಿಥಿಗಳು) ಬರಹತ್ತಿದ್ದಾರೆ. ಮೊದಲು ಒಬ್ಬ ಡಾಕ್ಟರನು ಬಂದನು, ಅನಂತರ ಒಬ್ಬ ವಕೀಲನು, ಕಡೆಗೆ ಒಬ್ಬ ಭಟ್ಟನು ಬಂದನು. ಅಲ್ಲಿ ಏನು ಆಗಿರಬೇಕು ಎಂದು ನಿನಗೆ ಅನಿಸುತ್ತದೆ ?"

(ಕ) "ಒಬ್ಬ ಹಳ್ಳಿಯವನು ಒಮ್ಮೆ ಪಟ್ಟಣಕ್ಕೆ ಬಂದಾಗ ಒಬ್ಬ ಮನುಷ್ಯನನ್ನು ಒಂದು ಮಾರ್ಗದಲ್ಲಿ ಯಾತರ ಮೇಲೋ ಹತ್ತಿಕೊಂಡು ಹೋಗುವುದನ್ನು ನೋಡಿ—'ಈ ಮನುಷ್ಯನು ಬಹಳ ಸೋಮಾರಿಯು. ಇವನು ಕೂತುಕೊಂಡು ನಡೆಯುತ್ತ ಹೋಗುತ್ತಾನೆ' ಎಂದನು. ಆದರೆ ಆ ಮನುಷ್ಯನ ಬಗ್ಗೆ ಹೀಗೆ—'ಕೂತುಕೊಂಡು ನಡೆಯುತ್ತ ಹೋಗುತ್ತಾನೆ' ಎಂದು ಅನ್ನಬೇಕಾಗಿದ್ದರೆ ಅವನು ಯಾತರ ಮೇಲೆ ಕೂತುಹೋಗುತ್ತಿದ್ದನು ?"

ಹುಡುಗರ ಉತ್ತರಗಳು—

ಸಮ

(ಅ) (೧) ಹೆಣ ಕಟ್ಟಿ ಹಾಕಿತ್ತು (ಕಾರಣಗಳನ್ನು ಕೊಟ್ಟು). (೨) ಯಾರಾದರೂ ಮನುಷ್ಯರು ಉರಲ ಹಾಕಿಕೊಂಡು ಸತ್ತರು.

(ಬ) (೧) ಒಬ್ಬನು ಬೇನೆ ಬಿದ್ದಿದ್ದಾನೆ ಮತ್ತು ಅಲ್ಲಿ ನ್ಯಾಯವಾಗಿದೆ,

---

[1] ತಮ್ಮ ತಮ್ಮ ಶಹರಕ್ಕೆ ಅಥವಾ ಗ್ರಾಮಕ್ಕೆ ಅನುಸರಿಸಿ ಇಲ್ಲಿ ತಕ್ಕ ಹೆಸರನ್ನು ಹಾಕಬೇಕು.

ಬೇನೆ ಬಿದ್ದವನು ಸತ್ತನು, ಬೇನೆ ಬಿದ್ದವನ ಆಸ್ತಿ ಇತ್ತು. ಡಾಕ್ಟರ—ಔಷಧ ಕೊಡಲಿಕ್ಕೆ, ವಕೀಲ—ಆಸ್ತಿಯನ್ನು ಅವರೊಳಗೆ ಹಂಚಿ ಕೊಡಲಿಕ್ಕೆ ಮತ್ತು ಭಟ್ಟನು—ಸತ್ತಮೇಲೆ ಮುಂದಿನ ಕೆಲಸ ಮಾಡಲಿಕ್ಕೆ. (೨) ಯಾರಾದರೂ ಸತ್ತಿರಬಹುದು; ಡಾಕ್ಟರ—ನೋಡಲಿಕ್ಕೆ, ವಕೀಲ—ಏನಾಗಿದೆ ನೋಡಲಿಕ್ಕೆ, ಪಂಚನಾಮೆ ಮಾಡಲಿಕ್ಕೆ, ಭಟ್ಟ—ಕಡೆಗೆ ಪೂಜೆಬೀಜೆ ಮಾಡಲಿಕ್ಕೆ, ಅವರದು—ಮಾಡಲಿಕ್ಕೆ. (೩) ಯಾರಾದರೂ ಸತ್ತಿರಬೇಕು; ಡಾಕ್ಟರ—ಔಷಧ ಕೊಡಲಿಕ್ಕೆ, ವಕೀಲ—ಕಾಗದಪತ್ರ ಬರಿಯಲಿಕ್ಕೆ, ಭಟ್ಟ—ಸತ್ತಮೇಲೆ ದಿನಕರ್ಮಕ್ಕೆ.

(ಕ) ಸಾಯಕಲ.

## ತಪ್ಪು

(ಅ) (೧) ಹಾವು. (೨) ಹೆಣ ಅಥವಾ ಒಂದು ದೊಡ್ಡ ಹಾವು. (೩) ಮುಂಗ. (೪) ಬೇರು. (೫) ಬೊಡ್ಡಿ ಬಿದ್ದಿರುತ್ತವೆ. (೬) ತೊಗಲ ಬಾವಲಿ. (೭) ಚಿಣಿಗಿ ಹಾವು. (೮) ಕಳ್ಳನನ್ನು—ಗಿಡದ ಮೇಲಿಂದ ಜಿಗಿದು ಬರುವವನಿದ್ದನು. (೯) ಕರಡಿ. (೧೦) ಆಲದ ಗಿಡದ ಬೇರು. (೧೧) ಪಕ್ಷಿ (೧೨) ಹಣ್ಣು. (೧೩) ದೆವ್ವ. (೧೪) ಮುಂಗನ ಬಾಲ, ಹಾವು ಎಂದು ತಿಳಿದು.

(ಬ) (೧) ಯಾರಾದರೂ ಸತ್ತಿರಬೇಕು, ಡಾಕ್ಟರ—ತಪಾಸ ಮಾಡಲಿಕ್ಕೆ, ವಕೀಲ—ಗೆಳೆಯನೆಂತ, ಭಟ್ಟ—ಸಾಯುವ ಮುಂದೆ ಏನೇನು ಮಾಡುತ್ತಾರೆ ಅದನ್ನು ಮಾಡಲಿಕ್ಕೆ. (೨) ಜಗಳ ನಡೆದಿರಬೇಕು. (೩) ಸತ್ತಿದ್ದರು, ಡಾಕ್ಟರ—ಔಷಧ ಕೊಟ್ಟರು, ವಕೀಲ—ಪಾವತಿ ಬರಕೊಂಡರು, ಭಟ್ಟ—ತಕ್ಕೊಂಡುಹೋದನು. (೪) ನ್ಯಾಯ ಆಗಿ ಅಪಘಾತ ಆಗಿರಬೇಕು (ಕಾರಣ ಕೊಡಲಿಕ್ಕೆ ಬರುವದಿಲ್ಲ). (೫) ಡಾಕ್ಟರ ಬರಲಿಕ್ಕೆ ಜಡ್ಡು ಆಗಿತ್ತು, ಭಟ್ಟ ಬಂದಾಗ ಹಬ್ಬ. (೬) ಡಾಕ್ಟರ—ಜಡ್ಡು ಆಗಿತ್ತೆಂತ, ವಕೀಲ—ಖಟ್ಲೆ ಮಾಡಲಿಕ್ಕೆ, ಭಟ್ಟ—ಊಟಕ್ಕೆ. (೭) ಯಾರಾದರೂ ವಿಷ ತಕ್ಕೊಂಡು ಸತ್ತಿದ್ದರು, ಡಾಕ್ಟರ—ನೋಡಲಿಕ್ಕೆ, ವಕೀಲ—ಖಟ್ಲೆ ಇರುವದೆಂದು, ಭಟ್ಟ—ಶ್ರಾದ್ಧ ಮಾಡಲಿಕ್ಕೆ.

(ಕ) (೧) ಮೋಟರಿನ ಮೇಲೆ ಕೂತುಕೊಂಡು ಹೋಗುತ್ತಿದ್ದನು.

(೨) ಕುದುರೆಯ ಮೇಲೆ. (೩) ಕಾಲಿನಿಂದ ನಡೆದು ಹೋಗುತ್ತಿದ್ದನು. (೪) ಮೋಟರ ಮೇಲೆ ಅಥವಾ ಸಾಯಕಲ ಮೇಲೆ—ಯುರೋಪಿಯನರು ಕೂತು ಹೋಗಬೇಕಾದರೆ ಮೋಟರ ಅಥವಾ ಸಾಯಕಲ ಬೇಕು. (೫) ಬೇರೆ ಮನುಷ್ಯನಿಗೆ ಹೊತ್ತುಕೊಂಡು ಹೋಗುತ್ತಿದ್ದನು. (೬) ನೆಲದ ಮೇಲೆ—ಗಿಡದ ಮೇಲೆ. (೭) ಎತ್ತಿನ ಮೇಲೆ. (೮) ಗಾಡಿಯ ಮೇಲೆ. (೯) ಸಣ್ಣ ಪ್ರಾಣಿಯ ಮೇಲೆ. (೧೦) ಕಾಲು ಹೋಗಿದ್ದವ ಕೂತು ಹೋಗುತ್ತಿದ್ದ. (೧೧) ಕತ್ತೆಯ ಮೇಲೆ. (೧೨) ಸಣ್ಣ ಆಕಳ ಕರ. (೧೩) ಟಾಂಗಾದ ಮೇಲೆ.

**ಪ್ರಶ್ನೆ ೬.**—ಏಳು ಅಂಕೆಗಳನ್ನು ತಿರುಗಿ ಅನ್ನುವದು (೨ರಲ್ಲಿ ೧. ಸೆಕಂಡಿಗೆ ಒಂದರಂತೆ ಓದಬೇಕು).

ಈ ವರ್ಷದ ಅಂಕಮಾಲೆಗಳು—

೨—೧—೮—೩—೪—೭—೯ ; ೯—೭—೨—೮—೪—೬—೫.

(ಹಿಂದಿನ ಅಂಕೆಯ ಪ್ರಶ್ನೆಗಳಂತೆ.)

**ವೈಕಲ್ಪಿಕ ಪ್ರಶ್ನೆ ೧.**—ಶಬ್ದಕೋಶ—೪೫ ಶಬ್ದಗಳು (ಒಟ್ಟು ೨೮,೦೦೦ ಶಬ್ದಗಳ ಪೈಕಿ ೧೨,೬೦೦ ಶಬ್ದಗಳು).

(ವರ್ಷ ೯, ವೈಕಲ್ಪಿಕ ಪ್ರಶ್ನೆಯಂತೆ.)

**ವೈಕಲ್ಪಿಕ ಪ್ರಶ್ನೆ ೨.**—ಅನಿಯಂತ್ರಿತ ಸಂಯೋಜನೆಯು[1]—ಮೂರು ಮಿನೀಟಿನೊಳಗೆ ೬೦ ಶಬ್ದಗಳನ್ನು ಹೇಳುವದು.

(ವರ್ಷ ೯, ಪ್ರಶ್ನೆ ೬ರಂತೆ.)

---

1 ಯಾವ ನಿರ್ಬಂಧವೂ ಇಲ್ಲದೆ ಶಬ್ದಗಳನ್ನು ಸಾಲಾಗಿ ಹೇಳುತ್ತ ಹೋಗುವದು. ಇದಕ್ಕೆ ಇಂಗ್ರಜಿಯಲ್ಲಿ ಮಾನಸ ಶಾಸ್ತ್ರಜ್ಞರು 'ಫ್ರೀ ಎಸೋಸಿಯೇಶನ್' ಎಂದು ಹೇಳಿರುವರು.

## ವರ್ಷ ೧೯

**ಪ್ರಶ್ನೆ ೧.**—ಗುಪ್ತಲಿಪಿಯನ್ನು ಉಪಯೋಗಿಸುವದು. "ಆ ಬದಿಗೆ ಲಗು ಹೋಗು" ಎಂದು ಬರೆಯುವದು (೨ ತಪ್ಪು. ೬ ಮಿನೀಟುಗಳು. ಅಂಕೆಗಳನ್ನು ಮೇಲೆ ಕೆಳಗೆ ತಿರುವು ಮುರುವು ಹಾಕಿದರೆ ಅಥವಾ ಒಂದು ಕಡೆಯ ಅಂಕೆಯು ತಪ್ಪಿದರೆ ಅರ್ಧ ತಪ್ಪು. ಆದರೆ ಎಲ್ಲ ಅಂಕೆಗಳನ್ನು ತಿರುವು ಮುರುವು ಬರೆದು ಶಬ್ದಗಳನ್ನು ಸರಿಯಾಗಿ ಗುಪ್ತ ಲಿಪಿಯೊಳಗೆ ಬರೆದರೆ ಏನೂ ತಪ್ಪು ಹಿಡಿಯಬಾರದು).

ಗುಪ್ತಲಿಪಿಯ ಅಚ್ಚು ಹಾಕಿದ ಕಾರ್ಡನ್ನು ಹುಡುಗನ ಮುಂದೆ ಇಟ್ಟು ಕೆಳಗಿನಂತೆ ಅನ್ನಬೇಕು—

"ಈ ಗುಪ್ತಲಿಪಿಯನ್ನು ನೋಡು. ಇದರ ಮೇಲಿಂದ ನಿನಗೆ ಕಾಣುವದೇನೆಂದರೆ, ಬೇಕಾದ ಅಕ್ಷರಗಳನ್ನು ಇದೇ ಪ್ರಕಾರ ಬರೆಯಲಿಕ್ಕೆ ಅಡ್ಡಿ ಇಲ್ಲ. ಈಗ ಅಕ್ಷರಗಳನ್ನು ಬರೆಯುವ ರೀತಿಯನ್ನು ನೆಟ್ಟಗೆ ನೋಡಿಕೊ. ಉದಾಹರಣಾರ್ಥವಾಗಿ, ಇಲ್ಲಿ 'ಸಾಲೆಗೆ ಹೋಗು' ಎಂದು ಮೊದಲು ಸಾದಾ ಲಿಪಿಯಲ್ಲಿ ಮತ್ತು ಅದನ್ನೇ ಇಲ್ಲಿ ಗುಪ್ತಲಿಪಿಯಲ್ಲಿ ಬರೆದದೆ. 'ಸಾ' ಈ ಅಕ್ಷರವು 'ಯವರ್ಗ' ದೊಳಗಿನ ಅಂದರೆ 'ಯ, ರ, ಲ, ವ' ದೊಳಗಿನ ೭ ನೇ ವ್ಯಂಜನವದೆ. ಆದ್ದರಿಂದ 'ಯ' ಬರೆದು ಕೆಳಗೆ '೭' ಈ ಅಂಕೆ ಬರೆದದೆ. ಹೀಗೆ 'ಯ$_{೭}$' ಅಂದರೆ 'ಸ' ಆಯಿತು. ಈಗ 'ಸಸಾ' ಬಳ್ಳಿಯೊಳಗಿನ 'ಸಾ' ಇದು ಎರಡನೇ ಅಕ್ಷರವದೆ ಎಂದು ಮೇಲೆ '೨' ಈ ಅಂಕೆ ಕೊಟ್ಟಿದೆ. ಈ ಪ್ರಕಾರ 'ಯ$_{೭}^{೨}$' ಅಂದರೆ 'ಸಾ' ಆಯಿತು. ಇದೇ ಪ್ರಕಾರ ಕಡೆಯ ಅಕ್ಷರ 'ಗು' ಇದು ಕವರ್ಗದೊಳಗಿನ ಮೂರನೇ ವ್ಯಂಜನವದೆ ಮತ್ತು 'ಗಗಾ' ಬಳ್ಳಿಯೊಳಗಿನ ಐದನೇ ಅಕ್ಷರವದೆ. ಆದ್ದರಿಂದ 'ಕ$_{೩}^{೫}$' ಅಂದರೆ 'ಗು' ಆಯಿತು. ಆಯಾ ಅಕ್ಷರಗಳಿಗೆ ಅನುಸ್ವಾರ ವಿಸರ್ಗ ಕೊಟ್ಟರೆ ಅದಕ್ಕನುಸರಿಸಿ ಓದಬೇಕು. ಇದೇ ಮೇರೆಗೆ 'ಘಂಟೆ ಆಯಿತು' ಇದನ್ನು ಗುಪ್ತಲಿಪಿಯೊಳಗೆ ಹೀಗೆ ಬರೆಯಬೇಕು.

“ನಾನು ಈಗ ನಿನಗೆ ಅರ್ಧ ಮಿನೀಟು ಕೊಡುತ್ತೇನೆ. ಈ ವೇಳೆಯಲ್ಲಿ ನೀನು ಈ ಗುಪ್ತಲಿಪಿಯನ್ನು ಏನೂ ಮಾತಾಡದೆ ನೋಡಿಕೊ. ಮುಂದೆ ನಾನು ಈ ಕಾರ್ಡನ್ನು ಬದಿಗೆ ಇಟ್ಟು ನಿನಗೆ ಕೆಲವು ಶಬ್ದಗಳನ್ನು ಈ ಗುಪ್ತಲಿಪಿಯೊಳಗೆ ಬರೆಯಲಿಕ್ಕೆ ಹೇಳುವೆನು. ಈಗ ನೋಡಿಕೊ.”

ಅರ್ಧ ಮಿನೀಟಿನ ನಂತರ ಕೆಳಗಿನಂತೆ ಅನ್ನಬೇಕು—

“ಈಗ ನೀನು ನನ್ನ ಸಲುವಾಗಿ ಏನೋ ಬರೆಯಬೇಕು. ಹ್ಯಾಗೆ ಬರೆಯಬೇಕೆಂಬದನ್ನು ನೆನಪಿನಲ್ಲಿಡು. ಯಾವ ವರ್ಗದೊಳಗಿನ ಅಕ್ಷರ ಬರೆಯಬೇಕಾಗಿದೆಯೋ ಆ ವರ್ಗದೊಳಗಿನ ಮೊದಲನೇ ಅಕ್ಷರವನ್ನು ಬರೆದು ಅದರ ಕೆಳಗೆ ಇಚ್ಛಿತ ಅಕ್ಷರದ ನಂಬರನ್ನು ಬರೆಯಬೇಕು. ಮುಂದೆ ಆ ಬಳ್ಳಿಯೊಳಗಿನ ಇಚ್ಛಿತ ಅಕ್ಷರದ ನಂಬರನ್ನು ಆ ಅಕ್ಷರದ ಮೇಲೆ ಬರೆಯಬೇಕು.”

ಅನಂತರ ಕಾರ್ಡನ್ನು ಬದಿಗೆ ಮಾಡಿ ಹೀಗೆ ಅನ್ನಬೇಕು—

“ಈಗ ‘ಆ ಬದಿಗೆ ಲಗು ಹೋಗು’ ಎಂದು ಗುಪ್ತಲಿಪಿಯೊಳಗೆ ಬರೆ. ‘ಆ ಬದಿಗೆ ಲಗು ಹೋಗು.’”

**ಪ್ರಶ್ನೆ ೨.**—ಕೌಶಲ್ಯದ ಪ್ರಶ್ನೆಗಳು (೩ರಲ್ಲಿ ೨. ಪ್ರತಿಯೊಂದಕ್ಕೆ ೫ ಮಿನೀಟುಗಳು. ಲೆಖ್ಖವನ್ನು ಎರಡನೇ ಸಾರಿ ಓದಿ ಹೇಳಬಹುದು. ಮೊದಲನೇ ಲೆಖ್ಖವು ತಪ್ಪಿದರೆ ಅದರ ಉತ್ತರವನ್ನು ತಿಳಿಸಿ ಕೊಡಬೇಕು).

ಹುಡುಗನನ್ನು ಕೆಳಗಿನಂತೆ ಬಾಯಿಯಿಂದಲೇ ಕೇಳಬೇಕು—

(ಅ) “ಒಬ್ಬ ತಾಯಿಯು ತನ್ನ ಮಗನನ್ನು ನದಿಯಿಂದ ೭ ಘಡೆ ನೀರು ತರಲಿಕ್ಕೆ ಕಳಿಸಿಕೊಟ್ಟಳು. ಆಕೆಯು ಅವನಿಗೆ ಒಂದು ೩ ಘಡೆಯದು, ಮತ್ತೊಂದು ೫ ಘಡೆಯದು—ಹೀಗೆ ಎರಡು ಭಾಂಡಿಗಳನ್ನು ಕೊಟ್ಟಳು. ಆ ಹುಡುಗನು ಬರೋಬರಿ ೭ ಘಡೆ ನೀರನ್ನು ಹ್ಯಾಗೆ ಅಳೆದು ತರಬೇಕು, ವಿಚಾರಮಾಡಿ ಹೇಳು. ಮೊದಲು ೫ ಘಡೆಯ ಭಾಂಡೆಯನ್ನು ತುಂಬಬೇಕು.”

ಹುಡುಗನು ಉತ್ತರವನ್ನು ಕಾಗದ ಪೇನಸಿಲು ತಕ್ಕೊಳ್ಳದೆ ಬಾಯಿಯಿಂದಲೇ ಹೇಳಬೇಕು. ಅವನು ಲೆಖ್ಖವನ್ನು ಹೇಗೆ ಬಿಡಿಸಬೇಕೆಂಬದನ್ನು ಪೂರಾ ತಿಳಿಸಿ ಹೇಳಬೇಕು. ಭಾಂಡಿಯ ಮೇಲೆ ಖಡುವಿನಿಂದ ಅಥವಾ ಬೇರೆ ರೀತಿಯಿಂದ ಗುರುತು ಬಿರುತು ಮಾಡಲಿಕ್ಕೆ ಬರುವುದಿಲ್ಲ ಎಂದು

ಅವನಿಗೆ ತಿಳಿಸಿ ಹೇಳಬೇಕು. ಅವನಿಗೆ ಐದು ಮಿನೀಟಿನೊಳಗೆ ಉತ್ತರವನ್ನು ಹೇಳಲಿಕ್ಕೆ ಬರದಿದ್ದರೆ ಅವನಿಗೆ ಮೊದಲನೇ ಉದಾಹರಣೆಯನ್ನು ತಿಳಿಸಿಕೊಡಬೇಕು ಮತ್ತು ಮುಂದಿನದು ಕೇಳಬೇಕು.

(ಬ) ಮೊದಲಿನಂತೆಯೇ. ಆದರೆ ೮ ಘಡೆ ನೀರು ತರಬೇಕು ಮತ್ತು ೫ ಮತ್ತು ೭ ಘಡೆಯ ಭಾಂಡಿಗಳು ಕೊಟ್ಟವೆ.

"ಮೊದಲು ೫ ಘಡೆಯ ಭಾಂಡಿಯನ್ನು ತುಂಬಬೇಕು."

(ಕ) ಇದೇ ಮೇರೆಗೆ. ಆದರೆ ೭ ಘಡೆ ನೀರು ತರಬೇಕು. ನಾಲ್ಕು ಮತ್ತು ೯ ಘಡೆಯ ಭಾಂಡಿಗಳು ಕೊಟ್ಟವೆ.

"ಮೊದಲು ೪ ಘಡೆಯ ಭಾಂಡಿಯನ್ನು ತುಂಬಬೇಕು."

**ಪ್ರಶ್ನೆ ೩.**—ಭಾವವಾಚಕ ಶಬ್ದಗಳೊಳಗಿನ ಭೇದವನ್ನು ಹೇಳುವದು (೪ರಲ್ಲಿ ೩. ಉತ್ತರದ ಸಲುವಾಗಿ ೧ ಮಿನೀಟಿನ ತನಕ ಹಾದೀ ನೋಡಬಹುದು).

(ಅ) "ಆಲಸ್ಯ ಮತ್ತು ನಿರುದ್ಯೋಗ—ಇವುಗಳೊಳಗಿನ ಭೇದ ವೇನು?"

ಇದೇ ಮೇರೆಗೆ—

(ಬ) "ಗರ್ವ ಮತ್ತು ಅಭಿಮಾನ."

(ಕ) "ಬಡವನು ಮತ್ತು ದೀನನು."

(ಡ) "ಅಪಮಾನ ಮತ್ತು ಅಪಕೀರ್ತಿ."

ಹುಡುಗನು ಇವುಗಳೊಳಗಿನ ಭೇದವನ್ನು ಸ್ಪಷ್ಟೀಕರಿಸದೆ ಅವುಗಳ ಬೇರೆ ಬೇರೆ ವ್ಯಾಖ್ಯೆಗಳನ್ನಷ್ಟೇ ಹೇಳಿದರೆ ಕೆಳಗಿನಂತೆ ಅನ್ನಬೇಕು—

"ಅಹುದು, ಆದರೆ ನನಗೆ—ಮತ್ತು—ಇವುಗಳೊಳಗಿನ ಹೆಚ್ಚುಕಡಿಮೆ ಬೇಕು. ಹೆಚ್ಚುಕಡಿಮೆ ಏನು ಅದೆ ಅಷ್ಟೇ ಹೇಳು."

ಹುಡುಗರ ಉತ್ತರಗಳು—

ಸಮ

(ಅ) (೧) ಆಲಸ್ಯ—ಕೆಲಸ ಇದ್ದರೂ ಮಾಡದೇ ಇರುವದು; ನಿರುದ್ಯೋಗ—ಕೆಲಸನೇ ಮಾಡಲಿಕ್ಕೆ ಇರುವ ಹಾಗೆ ಇಲ್ಲ. (೨) ನಿರುದ್ಯೋಗ—ಕೆಲಸ ಇಲ್ಲದಾಗ ಸುಮ್ಮನೆ ಕೂಡ್ರುವದು; ಆಲಸ್ಯ—

ಕೆಲಸ ಇದ್ದರೂ ಸುಮ್ಮನೆ ಕೂಡ್ರುವದು. (೩) ನಿರುದ್ಯೋಗ—ಮಾಡಲಿಕ್ಕೆ ಉದ್ಯೋಗವಿರುವದಿಲ್ಲ; ಆಲಸ್ಯ—ಕೆಲಸಮಾಡುವ ಹೊತ್ತಿನೊಳಗೆ ಸಾವಕಾಶಮಾಡುವದು. (೪) ಆಲಸ್ಯ—ಕೆಲಸಮಾಡಲಿಕ್ಕೆ ಹೇಳಿದರೆ ಬೇಸರಮಾಡಿ ಬಿಟ್ಟುಬಿಡುತ್ತಾನೆ; ನಿರುದ್ಯೋಗ—ಕೆಲಸಮಾಡುತ್ತಿರುತ್ತಾನೆ, ಕೆಲಸ ಸಿಕ್ಕಿರುವದಿಲ್ಲ. (೫) ಆಲಸ್ಯ—ಉದ್ಯೋಗಮಾಡುತ್ತಿದ್ದರೂ ಸಾವಕಾಶಮಾಡುವದು; ನಿರುದ್ಯೋಗ—ಉದ್ಯೋಗಮಾಡದೇ ಇರುವದು. (೬) ಆಲಸ್ಯ—ತನ್ನ ಸ್ವಂತ ತಪ್ಪಿನಿಂದ ಮಾಡುವದು; ನಿರುದ್ಯೋಗ—ಯಾರಾದರೂ ಕೆಲಸ ಕೊಡದಿದ್ದರೆ.

(ಬ) (೧) ಅಭಿಮಾನ ಅಂದರೆ ಎರಡನೇದವರು ಸಣ್ಣವರು ಎಂದು ತಿಳಕೊಳ್ಳುತ್ತಾನೆ; ಗರ್ವ ಅಂದರೆ ನನಗಿಂತ ಯಾರೂ ಹೆಚ್ಚಿನವ ಇಲ್ಲ ಅನ್ನುತ್ತಾನೆ. (೨) ಗರ್ವ—ಸುಮ್ಮನೆ ಡಾಂಭಿಕತನ, ಕಾರಣವಿಲ್ಲದೆ; ಅಭಿಮಾನ—ಯಾವದೊಂದು ವಸ್ತುವಿನ ಬಗ್ಗೆ. (೩) ಅಭಿಮಾನ ಚಲೋ ಅರ್ಥದಲ್ಲಿ ಉಪಯೋಗಮಾಡುತ್ತಾರೆ; ಗರ್ವ—ಸೊಕ್ಕು, ತನ್ನದೇ ಹೇಳುವದು, ಚಲೋ ಅಲ್ಲ. (೪) ಅಭಿಮಾನ—ತಕ್ಕ ಇದ್ದದ್ದಕ್ಕೆ ಗರ್ವಪಡುವದು; ಗರ್ವ—ಸೊಕ್ಕು. (೫) ಅಭಿಮಾನ ಚಲೋ, ಗರ್ವ ಕೆಟ್ಟ. (೬) ಗರ್ವ—ಸುಳ್ಳಸುಳ್ಳೇ ದೊಡ್ಡಸ್ತಿಕೆಯನ್ನು ತೋರಿಸುವದು, ತನ್ನಲ್ಲಿ ಇಲ್ಲದ್ದನ್ನೇ ಮಾಡುವದು; ಅಭಿಮಾನ—ಏನಾದರೂ ಕೆಲಸ ಸಾಧಿಸೇಬಿಡುವದು, ಇದ್ದೂ ಹೆಚ್ಚು ಮಾಡುವದು. (೭) ಗರ್ವ—ಮನುಷ್ಯನಿಗೆ ಇದ್ದಾಗ; ಅಭಿಮಾನ—ದೇಶದ್ದು ಇದ್ದಾಗ. (೮) ಅಭಿಮಾನ—ಜಾತಿಯ ಸಂಬಂಧ ಅಭಿಮಾನ; ಗರ್ವ—ತಾನೇ ಮೇಲೆ ತಾನೇ ಹೆಚ್ಚಿನವ ಅನ್ನುವದು. (೯) ಗರ್ವ—ತನ್ನ ವಿಷಯಕ್ಕೆ ಸುಳ್ಳಸುಳ್ಳೇ; ಅಭಿಮಾನ—ತನ್ನ ವಿಷಯಕ್ಕೆ ಅಥವಾ ಮತ್ತೊಬ್ಬನ ವಿಷಯಕ್ಕೆ, ಶಹಾಣೆ ಇದ್ದರೆ.

(ಕ) (೧) ಬಡವರು ಅಂದರೆ ಕೂಲಿ ಮಾಡಿಕೊಂಡು ತಿನ್ನುತ್ತಾರೆ; ದೀನರು ಅಂದರೆ ಮನೆಮನೆಗೆ ಭಿಕ್ಷಾ ಬೇಡಲಿಕ್ಕೆ ಹೋಗುತ್ತಾರೆ. (೨) ಬಡತನ—ಏನೂ ಹಣವಿಲ್ಲದೆ ಇರುವದು; ದೀನತನ—ಬಿಕ್ಕೇ ಬೇಡಿ ಹೊಟ್ಟೆ ತುಂಬಿಕೊಳ್ಳುವದು. (೩) ಬಡವನು—ಸನ್ಮಾ ಇರಬಹುದು ಅಥವಾ ಇರಲಿಕ್ಕಿಲ್ಲ; ದೀನ—ಸನ್ಮಾ ಇರುತ್ತಾನೆ. (೪) ಬಡವನು—ತನ್ನ ಹೊಟ್ಟೆಗೆ ಸಾಕಾಗುವಷ್ಟು ದುಡಿಯುತ್ತಾನೆ; ದೀನನು—ಉದ್ಯೋಗವಿಲ್ಲದೆ ತಿರುಗು

ತ್ತಾನೆ. (೫) ಬಡವನು—ತನ್ನ ಹೊಟ್ಟೆಯ ಪೂರ್ತೆ ಮಾಡಿಕೊಂಡು ಇರುವವನು ; ದೀನನು—ಮನೆಮನೆಗೆ ತಿರುಗಿಕೊಂಡು ಇರುವವನು. (೬) ಬಡವನು—ದುಡ್ಡಿನಿಂದ ಬಡವನು; ದೀನ—ತ್ರಾಸ ಆದವನು. (೭) ಬಡವನು—ದುಡ್ಡು ಇಲ್ಲದವನು ಆದರೆ ಕೆಲಸಮಾಡಿ ಹೊಟ್ಟೆ ತುಂಬಿಕೊಳ್ಳುವವನು ; ದೀನನು—ಸಾವಕಾರನ ಕಡೆಗೆ ನಮ್ರತನದಿಂದ ಮಾತಾಡಿ ದುಡ್ಡು ಇಸಕೊಳ್ಳುವವನು. (೮) ಬಡವನು—ಅವನ ಹತ್ತರ ರೊಕ್ಕ ಇರುವದಿಲ್ಲ ; ದೀನನು—ರೊಕ್ಕ ಇದ್ದರೂ ಬಡವನಂತೆ ನಡಿಯುತ್ತಾನೆ. (೯) ಬಡವನು—ಸಾಧಾರಣ ತನ್ನ ಹೊಟ್ಟೆಗೆ ಮಾಡಿಕೊಂಡುಹೋಗುವವನು ; ದೀನನು—ಅಗದೀ ಬಡವನು. (೧೦) ಬಡವನು—ರೊಕ್ಕ ಇಲ್ಲದವನು ; ದೀನನು—ಯಾರಾದರೂ ದಿಕ್ಕಿಲ್ಲದವನು.

(ಡ) (೧) ಅಪಮಾನ—ನಾವು ಇರುವ ಸಂಘದಲ್ಲಿ ಮಾತ್ರ ; ಅಪಕೀರ್ತಿ—ಎಲ್ಲ ಜನರಲ್ಲಿ ನಮ್ಮ ಅಪಮಾನ. (೨) ಅಪಮಾನ—ಅವ ಒಬ್ಬವನಿಗೆ ಅಪಮಾನ ; ಅಪಕೀರ್ತಿ—ನಾಲ್ಕು ಮಂದಿಯೊಳಗೆ ಅವನ ಹೆಸರು ಕೆಟ್ಟ ಮಾಡುವದು. (೩) ಅಪಕೀರ್ತಿ—ಇಡೀ ದೇಶದಲ್ಲಿ ಕೀರ್ತಿ ಹೋಗುತ್ತದೆ ; ಅಪಮಾನ—ಎಲ್ಲಿ ಕೆಟ್ಟ ಆಗುತ್ತದೆ ಅಲ್ಲಿ ಅಷ್ಟೇ. (೪) ಅಪಮಾನ—ಎರಡನೇಯವರಿಗೆ ಕೆಟ್ಟ ಮಾತಾಡಿದರೆ ; ಅಪಕೀರ್ತಿ—ಮಾಡಿದ ಮೇಲೆ ಕೀರ್ತಿ ಹಬ್ಬುತ್ತದೆ ಅದಕ್ಕೆ ಅಪಕೀರ್ತಿ ಅನ್ನುತ್ತಾರೆ. (೫) ಅಪಮಾನ—ಒಂದೇ ಸ್ಥಳದಲ್ಲಿ ಅಮರ್ಯಾದೆ ಮಾಡುವದು ; ಅಪಕೀರ್ತಿ—ಸುತ್ತಲೆಲ್ಲ ಕೆಟ್ಟ ಕೀರ್ತಿ ಹಬ್ಬುವದು. (೬) ಅಪಕೀರ್ತಿ—ಜಗತ್ತಿನಲ್ಲಿ ಎಲ್ಲ ; ಅಪಮಾನ—ಸ್ವಲ್ಪ ಜನರಿಂದ. (೭) ಅಪಮಾನ—ಸ್ವಲ್ಪ ಹೊತ್ತಿನ ತನಕ ; ಅಪಕೀರ್ತಿ—ಕಡೆ ತನಕ. (೮) ಅಪಮಾನ—ಎರಡನೇಯವರು ಮಾಡಿದ್ದಕ್ಕೆ ; ಅಪಕೀರ್ತಿ—ತನ್ನಿಂದ ತಾನೇ ಹುಟ್ಟಿಸಿಕೊಳ್ಳುವದಕ್ಕೆ.

## ತಪ್ಪು

(ಅ) (೧) ಮನುಷ್ಯನು ಆಲಸ್ಯ ಬಂದಾಗ ಅಷ್ಟೇ ಕೆಲಸಮಾಡುವದಿಲ್ಲ, ನಿರುದ್ಯೋಗ ಅಂದರೆ ಯಾವಾಗಲೂ ಕೆಲಸಮಾಡುವದಿಲ್ಲ. (೨) ಆಲಸ್ಯ—ಕೆಲಸ ಬಹಳ ಹೊತ್ತು ಮಾಡಿದರೆ ಆಲಸ್ಯ ಬರುತ್ತದೆ ; ನಿರುದ್ಯೋಗ—ಕೆಲಸ ಬಿಟ್ಟುಕೊಂಡು ಕೂತರೆ. (೩) ಆಲಸ್ಯ—ಕೆಲಸಮಾಡದೇ ಸುಮ್ಮನೆ

ಕೂಡ್ರುವದು ; ನಿರುದ್ಯೋಗ—ಕೆಲಸಮಾಡುತ್ತಿರುವದಿಲ್ಲ. (೪) ಆಲಸ್ಯ—ಕಣ್ಣುಮುಚ್ಚಿಕೊಂಡು ಕೂಡ್ರುವದು, ಏಳುವ ಹಾಗೆ ಇಲ್ಲ; ನಿರುದ್ಯೋಗ—ಉದ್ಯೋಗವಿದ್ದರೂ ಮಾಡುವ ಹಾಗೆ ಇಲ್ಲ, ಸುಮ್ಮನೆ ಕೂಡ್ರುವದು. (೫) ಆಲಸ್ಯ—ಕೆಲಸಮಾಡಲಿಕ್ಕೆ ಪ್ರೀತಿ ಇರುವದಿಲ್ಲ; ನಿರುದ್ಯೋಗ—ಕೆಲಸಮಾಡಲಿಕ್ಕೆ ಆಗುವದಿಲ್ಲ. (೬) ಆಲಸ್ಯ—ಈ ಹೊತ್ತು ಮಾಡುವದು ನಾಳೆ ಮಾಡುವದು ಎಂದು ಬಹಳ ದಿವಸ ಬಿಡುವದು, ಮುಂದೆ ಹಾಕಿದರೂ ಮಾಡುತ್ತಾನೆ; ನಿರುದ್ಯೋಗ—ಕೆಲಸಮಾಡದೇ ಇರುವದು.

(ಬ) (೧) ಗರ್ವ—ಸೊಕ್ಕು ; ಅಭಿಮಾನ—ಕೀರ್ತಿಯ ಸಲುವಾಗಿ ಆಶಿಸುವದು. (೨) ಗರ್ವ—ನಾನೇ ದೊಡ್ಡವ ಎಂತ ಸೊಕ್ಕಿನಿಂದ ಅಡ್ಡಾಡುತ್ತಾನೆ; ಅಭಿಮಾನ—ಎಲ್ಲಿ ಹ್ಯಾಗೆ ನಡಿಯಬೇಕು ಗೊತ್ತಿರುತ್ತದೆ. (೩) ಗರ್ವ—ತಾನೇ ಹೆಚ್ಚು ಎಂದು ಅನ್ನುವದು, ಬೈಯುವದು ; ಅಭಿಮಾನ—ದೊಡ್ಡಸ್ತನ ತೋರಿಸುವದು. (೪) ಅಭಿಮಾನ—ತನ್ನ ಸಲುವಾಗಿ, ತನ್ನ ಸಮಾಜದ ಸಲುವಾಗಿ ಬಡದಾಡುವದು ; ಗರ್ವ—ರಸ್ತೆಯ ಮೇಲೆ ಮಾತಾಡದೇ ಹೋಗುವದು. (೫) ಗರ್ವ—ವೈರಿ ಬಂದರೆ ಅವರ ಮೇಲೆ ಸೊಕ್ಕು ತೋರಿಸುವದು ; ಅಭಿಮಾನ—ತಮ್ಮ ಪೈಕಿ ಬಂದರೆ ಅವರಿಗೆ ಮರ್ಯಾದೆ ಮಾಡುವದು. (೬) ಗರ್ವ—ಸೊಕ್ಕು ತೋರಿಸುವದು ; ಅಭಿಮಾನ—ತಾನೇ ಹೆಚ್ಚು ಎಂದು ತೋರಿಸುವದು. (೭) ಗರ್ವ—ಸೊಕ್ಕಿನಿಂದ ಮಾತಾಡುವ ಹಾಗೆ ಇಲ್ಲ, ಮಾನ ಕೊಡುವದಿಲ್ಲ ; ಅಭಿಮಾನ—ಮಾನ ಕೊಡುತ್ತಾರೆ.

(ಕ) (೧) ಬಡವನು—ದುಡ್ಡು ಇರುವದಿಲ್ಲ; ದೀನ—ಆಪ್ತರು ಎಲ್ಲವರು ಸತ್ತು ಹೋಗುತ್ತಾರೆ. (೨) ಬಡವನು—ದುಡ್ಡು ಆಶಿಸುವದಿಲ್ಲ ; ದೀನ—ಕೈಗೆ ಕಾಲಿಗೆ ಏನಾದರೂ ಆದರೆ ಕುಂಟ. (೩) ಬಡವನು—ರೊಕ್ಕ ಇರುವದಿಲ್ಲ ; ದೀನ—ನಮ್ರತನದಿಂದ ಇರುತ್ತಾನೆ, ರೊಕ್ಕ ಇರುತ್ತದೆ.

(ಡ) (೧) ಅಪಮಾನ ಅಂದರೆ ಕೆಟ್ಟ ನಡತೆಯನ್ನು ಎಲ್ಲ ಜನರ ಮುಂದೆ ಆಡಿ ತೋರಿಸಿದರೆ ಅವನಿಗೆ ಅಪಮಾನ ಆಗುತ್ತದೆ ; ಅಪಕೀರ್ತಿ ಅಂದರೆ ನಾವು ಏನೂ ಮಾಡಿರುವದಿಲ್ಲ ಸುಳ್ಳೇ ನಮ್ಮ ಮೇಲೆ ಅಪವಾದ ಕೊಡುತ್ತಾರೆ. (೨) ಅಪಮಾನ—ದೊಡ್ಡ ಸಭೆಯೊಳಗೆ ಬೈದರೆ; ಅಪ

ಕೀರ್ತಿ—ಮಗನು ತಂದೆಯನ್ನು ಅನುಸರಿಸದಿದ್ದರೆ ತಂದೆಗೆ ಅಪಕೀರ್ತಿ ಆಗುತ್ತದೆ. (೩) ಅಪಕೀರ್ತಿ—ಕೀರ್ತಿ ಕೆಡಿಸುವದು ; ಅಪಮಾನ—ಮಾನ ಹೋಗುವದು. (೪) ಅಪಮಾನ—ತನ್ನ ಮಾನವನ್ನು ಕಳೆಯುವದು ; ಅಪಕೀರ್ತಿ—ಎರಡನೇಯವರ ಕಡೆಯಿಂದ ಕೀರ್ತಿಯನ್ನು ಪಡೆಯುವದು. (೫) ಅಪಕೀರ್ತಿ—ಕೆಲಸ ಹಿಡಿದಿರುತ್ತಾನೆ, ಸಾಧಿಸದಿದ್ದರೆ ಕೀರ್ತಿ ಇದ್ದದ್ದು ಹೋಗುತ್ತದೆ ; ಅಪಮಾನ—ಮನುಷ್ಯನಿಗೆ ಹತ್ತದ್ದು. (೬) ಅಪಕೀರ್ತಿ—ಮೊದಲೇ ಕೀರ್ತಿ ಇರುತ್ತದೆ, ಹಿಂದುಗಡೆ ಕ್ಷುಲ್ಲಕ ಕೆಲಸದಲ್ಲಿ ಸೋತರೆ ಅಪಕೀರ್ತಿ ಬರುತ್ತದೆ; ಅಪಮಾನ—ಬರೇ ಸೋಲುವಿಕೆ. (೭) ಅಪಕೀರ್ತಿ—ಕೀರ್ತಿ ಹೊಂದಿದವನು, ಕೀರ್ತಿ ಹೋಗಿರುತ್ತದೆ; ಅಪಮಾನ—ಬುದ್ಧಿ ಹೇಳಲಿಕ್ಕೆ ಹೋಗುತ್ತಾನೆ ಅವನಿಗೆ ಬೈದರೆ. (೮) ಅಪಮಾನ—ಬಹಳ ಜನರಿಂದ ಅಪಮಾನ ಮಾಡಿಕೊಳ್ಳುವದು, ಅಪಕೀರ್ತಿ—ಕೆಟ್ಟ ಕೆಲಸ ಮಾಡಿದರೆ ಅಪಕೀರ್ತಿ ಆಗುತ್ತದೆ.

**ಪ್ರಶ್ನೆ ೪.**—ಬೀನೇನ ಕಾಗದ ಕತ್ತರಿಸುವ ಪ್ರಶ್ನೆ (ಈ ಪ್ರಶ್ನೆಯನ್ನು ಕೊಡುವದಾದರೆ ೧೪ ವರ್ಷದ ೧ನೆಯ ಪ್ರಶ್ನೆಯ ಮುಂಚೆ ಕೊಡಬೇಕು. ಹುಡುಗನು ಮಡಿಕೆಗಳನ್ನು ಪೇನಸಿಲಿನಿಂದ ತೋರಿಸಬೇಕು ; ಮತ್ತು ಕತ್ತರಿಸಿದ ಚೌಕ ತೂತುಗಳ ಸ್ಥಳಗಳನ್ನು ಪೇನಸಿಲಿನಿಂದ ಇವುಗಳಲ್ಲಿ ಒಂದು ಮಡಿಕೆಯ ಎರಡೂ ಅರ್ಧಗಳ ನಡುಮಧ್ಯದಲ್ಲಿ ತೋರಿಸಬೇಕು. ಪೂರಾ ಡ್ರಾಯಿಂಗನ್ನು ತೆಗೆಯಲಿಕ್ಕೆ ೨ ಮಿನೀಟುಗಳು).

ವರ್ಷ ೧೪, ಪ್ರಶ್ನೆ ೧ರೊಳಗೆ ವಿವರಿಸಿದಂತೆ ಒಂದು ಕಾಗದದ ತುಂಡನ್ನು ತಕ್ಕೊಳ್ಳಬೇಕು ಮತ್ತು ಕೆಳಗಿನಂತೆ ಅನ್ನಬೇಕು—

"ನಾನು ಏನು ಮಾಡುತ್ತೇನೆ ನೆಟ್ಟಗೆ ನೋಡು. ಇಲ್ಲಿ ನೋಡು ನಾನು ಈ ಕಾಗದವನ್ನು ಹೀಗೆ ಮಡಿಚುತ್ತೇನೆ (ತೀರ ಮಧ್ಯದಲ್ಲಿ ಒಮ್ಮೆ ಮಡಿಚಿ) ; ಮುಂದೆ ನಾನು ಇದನ್ನು ಹೀಗೆ ಮಡಿಚುತ್ತೇನೆ (ಎರಡನೇ ಸಾರಿ ಮಧ್ಯದಲ್ಲಿ ಮೊದಲನೇ ಮಡಿಕೆಗೆ ಕಾಟಕೋಣ ಮಾಡಿ ಮಡಿಚಿ). ಈಗ ನಾನು ಇಲ್ಲಿ ಒಂದು ತೂತು ಮಾಡುತ್ತೇನೆ."

ಇಷ್ಟು ಅಂದು ಬಿಡಿ ಎಲೆಗಳು ಇಲ್ಲದಂಥ ಒಂದೇ ಏಣಿ ಇದ್ದಂಥ ಬಾಜುವಿನ ಮಧ್ಯದಲ್ಲಿ ತ್ರಿಕೋಣಾಕೃತಿ ಒಂದು ತೂತನ್ನು ಕತ್ತರಿಯಿಂದ ಕತ್ತರಿಸಬೇಕು. ಮುಂದೆ ಈ ಮಡಿಚಿದಂಥ ಕಾಗದವನ್ನೇ ಹುಡುಗನಿಗೆ

ತೂತು ಕಾಣುವಂತೆ ಟೇಬಲಿನ ಮೇಲೆ ಬೆರಳಿನಿಂದ ಒತ್ತಿ ಹಿಡಿಯಬೇಕು. ಹುಡುಗನಿಗೆ ಒಂದು ಸೀಸ ಪೇನಸಿಲು ಮತ್ತು ಉಪಯೋಗಮಾಡಿದ ಕಾಗದದಂಥ ಇನ್ನೊಂದು ಕಾಗದ—ಇವನ್ನು ಕೊಟ್ಟು ಕೆಳಗಿನಂತೆ ಅನ್ನಬೇಕು—

"ಈ ಕಾಗದವನ್ನು ತೆಗೆದುಕೊ. ಮತ್ತು ಈ ಕಾಗದವನ್ನು ಬಿಚ್ಚಿದ ಕೂಡಲೆ ಹ್ಯಾಗೆ ಕಾಣುವದು ಎಂಬದನ್ನು ಪೇನಸಿಲಿನಿಂದ ಈ ಕಾಗದದ ಮೇಲೆ ತೆಗೆದು ತೋರಿಸು. ಕಾಗದದೊಳಗಿನ ಮಡಿಕೆಗಳನ್ನು ತೋರಿಸಲಿಕ್ಕೆ ಗೆರೆಗಳನ್ನು ತೆಗೆ; ಮತ್ತು ಕತ್ತರಿಸಿದ ಭಾಗದಿಂದ ಏನೇನು ಹೊರಡುವದು ಅದನ್ನೆಲ್ಲ ತೋರಿಸು."

ಕಾಗದವು ಸರಿಯಾಗಿ ಚೌರಸವಿಲ್ಲದೆ ಒಂದು ಬಾಜು ಸ್ವಲ್ಪ ಹೆಚ್ಚು ಉದ್ದವಿದ್ದರೆ ಹುಡುಗನು ತೂತುಗಳನ್ನು ಬೇಕಾದ ಮಡಿಕೆಯ ಮೇಲೆ ತೆಗೆದರೂ ಬರುತ್ತದೆ. ಆದರೆ ಅವುಗಳ ಸಂಖ್ಯೆ ಮತ್ತು ಅವುಗಳ ಸ್ಥಳ—ಒಂದು ಮಡಿಕೆಯ ಎರಡೂ ಅರ್ಧಗಳ ನಡುಮಧ್ಯದಲ್ಲಿ—ಸರಿಯಾಗಿ ಇರಬೇಕು.

ತೂತುಗಳ ಆಕಾರ ತೀರ ಸರಿ ಇರಬೇಕೆಂದಿಲ್ಲ.

**ಪ್ರಶ್ನೆ ೫.**—ಮೂವತ್ತು ಅಕ್ಷರಗಳನ್ನು ತಿರುಗಿ ಅನ್ನುವದು (೨ರಲ್ಲಿ ೧ತೀರ ಸರಿ ಇರಬೇಕು).

ಈ ವರ್ಷದಲ್ಲಿ ಕೆಳಗಿನ ಅವತರಣಗಳನ್ನು ಕೊಡಬೇಕು—

(೧) "ರಾಮನು ಅಜ್ಜಿಯ ಕಡೆಗೆ ಹಗಲೆಲ್ಲ ಹೋಗುತ್ತಾನೆ; ಏಕೆಂದರೆ, ಆಕೆಯು ಕಥೆ ಹೇಳುತ್ತಾಳೆ."

(೨) "ನಿನ್ನೆ ನಾನು ಮಾರ್ಗದಲ್ಲಿ ಚಂದವಾದ ಬೆಕ್ಕನ್ನು ನೋಡಿದೆ. ಅದರ ಕೂದಲು ಕರ್‍ರಗೆ ಇದ್ದವು."

(ಹಿಂದಿನ ವರ್ಷಗಳೊಳಗಿನ ಅಕ್ಷರ ಅನ್ನುವ ಪ್ರಶ್ನೆಗಳಂತೆ.)

ಈ ವರ್ಷದಲ್ಲಿ ಮಾತ್ರ ಎರಡರಲ್ಲಿ ಒಂದು ಅವತರಣವನ್ನು ಏನೂ ತಪ್ಪಿಲ್ಲದೆ ಅನ್ನಬೇಕು.

**ಪ್ರಶ್ನೆ ೬.**—ತ್ರಿಕೋಣವನ್ನು ಕಲ್ಪನೆಯಿಂದ ತಿರುವು ಮುರುವು ಮಾಡುವದು. ಕರ್ನಾಟಕದ ನಮೂನೆ (ಆಕೃತಿಯನ್ನು ಸಂಪೂರ್ಣವಾಗಿ ತೆಗೆಯಲಿಕ್ಕೆ ೨ ಮಿನಿಟುಗಳು).

೬ ಇಂಚು × ೪ ಇಂಚು ಆಕಾರದ, ವರ್ಷ ೬, ಪ್ರಶ್ನೆ ೩ರೊಳಗೆ ತೋರಿಸಿದಂತೆ ನಡುಮಧ್ಯದಲ್ಲಿ ಕರ್ಣದಿಂದ ಕರ್ಣದ ವರೆಗೆ ಕತ್ತರಿಸಿದಂಥ ಕಾರ್ಡನ್ನು, ಅದರ ಕತ್ತರಿಸಿದ ಭುಜಗಳನ್ನು ಕೆಳಗಿನ ೧ನೇ ಆಕೃತಿಯಲ್ಲಿ ತೋರಿಸಿದಂತೆ ಒಂದಕ್ಕೊಂದು ಹೊಂದಿಸಿ ಮತ್ತು ಅದರ **ಅ, ಕ** ಭುಜವನ್ನು ಹುಡುಗನ ಕಡೆಗೆ ಮಾಡಿ, ಟೇಬಲಿನ ಮೇಲೆ ಹುಡುಗನ ಎದುರಿಗೆ ಇಡಬೇಕು. ಆದರೆ **ಅ, ಬ, ಕ**—ಈ ಅಕ್ಷರಗಳನ್ನು ಬರೆದಿರಬಾರದು. ಮುಂದೆ ಕೆಳಗಿನಂತೆ ಅನ್ನಬೇಕು—




ಆಕೃತಿ ೧.




ಆಕೃತಿ ೨.

“ಈ ಕಾರ್ಡಿನ ಕೆಳಗಿನ ತುಂಡಿನ ಕಡೆಗೆ ಲಕ್ಷ್ಯಗೊಟ್ಟು ನೋಡು (ತುಂಡನ್ನು ತೋರಿಸಿ). ಈಗ ಹೀಗೆ ತಿಳಿದುಕೊ; ನಾನು ಈ ಕೆಳಗಿನ ತುಂಡನ್ನು ಎತ್ತಿ ಹೀಗೆ ತಿರುಗಿಸಿ (ತುಂಡಿಗೆ ಕೈ ಹಚ್ಚದೆ ಕೈಯಿಂದ ಹ್ಯಾಗೆ ತಿರುಗಿಸಬೇಕೆಂಬದನ್ನು ಸನ್ನೆಯಿಂದ ತೋರಿಸಿ) ಇಡುತ್ತೇನೆ. ಹೇಗೆಂದರೆ, ಕೆಳಗಿನ ತುಂಡಿನ ಈ ಮೂಲೆಯನ್ನು (ಕೆಳಗಿನ ತುಂಡಿನ **ಬ** ಮೂಲೆಯ ಕಡೆಗೆ ಬೆರಳುಮಾಡಿ) ಮೇಲಿನ ತುಂಡಿನ ಈ ಮೂಲೆಗೆ (ಮೇಲಿನ ತುಂಡಿನ **ಅ** ಮೂಲೆಯ ಕಡೆಗೆ ಬೆರಳುಮಾಡಿ) ಹೊಂದಿಸಿ ಇಡುತ್ತೇನೆ; ಮತ್ತು ಕೆಳಗಿನ ತುಂಡಿನ ಈ ಮೂಲೆಯನ್ನು (ಕೆಳಗಿನ ತುಂಡಿನ **ಅ** ಮೂಲೆಯ ಕಡೆಗೆ ಬೆರಳುಮಾಡಿ) ಮೇಲಿನ ತುಂಡಿನ ಈ ಮೂಲೆಗೆ (ಮೇಲಿನ ತುಂಡಿನ **ಬ** ಮೂಲೆಯ ಕಡೆಗೆ ಬೆರಳುಮಾಡಿ) ಹೊಂದಿಸಿ

ಇಡುತ್ತೇನೆ. ಹಾಗಾದರೆ, ಈಗ ಇದೆಲ್ಲ ಆಕೃತಿಯು ಹ್ಯಾಗೆ ಕಾಣುವದು? ಈಗ ನಾನು ಕೆಳಗಿನ ತುಂಡನ್ನು ಬದಿಗೆ ತೆಗೆದಿಡುತ್ತೇನೆ (ಇಷ್ಟೆಂದು ಕೆಳಗಿನ ತುಂಡನ್ನು ಬದಿಗೆ ಇಡಬೇಕು). ನಾನು ಹೇಳಿದ ಹಾಗೆ ಈ ತುಂಡು ಇಟ್ಟಿದೆ ಎಂದು ತಿಳಿ; ಅದರ ಆಕೃತಿಯನ್ನು ಸರಿಯಾಗಿ ತೆಗೆದು ತೋರಿಸು. ಮೇಲಿನ ತ್ರಿಕೋಣದ ಆಕೃತಿಯನ್ನು ಮೊದಲು ತೆಗೆದು ಆರಂಭಮಾಡು.''

ಹುಡುಗನು ತೆಗೆದ ಪೂರ್ಣ ಆಕೃತಿಯು ಮೇಲಿನ ಆಕೃತಿ ೨ರಲ್ಲಿ ತೋರಿಸಿದಂತೆ ಇರಬೇಕು.

ಹುಡುಗನ ಆಕೃತಿಗೆ ಗುಣಗಳನ್ನು ಕೊಡುವ ಮುಂದೆ ಲಕ್ಷ್ಯದಲ್ಲಿ ಇಡತಕ್ಕಂಥ ಸಂಗತಿಗಳು—(೧) ಆಕೃತಿಯು ಕರ್ಣರೇಷೆಯ ಎರಡೂ ಪಾರ್ಶ್ವಗಳಲ್ಲಿ ಸಾಧಾರಣವಾಗಿ ಅನುರೂಪವಾಗಿರಬೇಕು. (೨) **ಅ′, ಬ′** ಮೂಲೆಗಳು **ಬ ಅ** ಮೂಲೆಗಳಿಗೆ ಸಮವಾಗಿ ಕೂಡುವಂತೆ ಇಟ್ಟಿರಬೇಕು. (೩) **ಕ** ಕೋಣವು ಸಾಧಾರಣವಾಗಿ ಕಾಟಕೋಣವಾಗಿರಬೇಕು.

(೨) ಮತ್ತು (೩) ಈ ಸಂಗತಿಗಳನ್ನು (೧) ಈ ಸಂಗತಿಯು ಒಂದು ರೀತಿಯಿಂದ ಒಳಗೊಂಡಿರುತ್ತದೆ.

**ವೈಕಲ್ಪಿಕ ಪ್ರಶ್ನೆ.**—ಶಬ್ದಕೋಶ—೫೫ ಶಬ್ದಗಳು (ಒಟ್ಟು ೨೮,೦೦೦ ಶಬ್ದಗಳಲ್ಲಿ ೧೫,೪೦೦ ಶಬ್ದಗಳು).

(ಹಿಂದಿನ ವರ್ಷಗಳ ಶಬ್ದಕೋಶದ ಪ್ರಶ್ನೆಗಳಂತೆ.)

## ವರ್ಷ ೨೨

**ಪ್ರಶ್ನೆ ೧.**—ಸ್ವಾಭಾವಿಕ ಸಂಬಂಧಗಳನ್ನು ತಿಳಕೊಳ್ಳುವದು (೩ರಲ್ಲಿ ೨. ಅವಶ್ಯವೆನಿಸಿದರೆ ಎರಡನೇ ಸಾರಿ ಓದಬಹುದು).

(ಅ) ತೋಫಿನ ಗುಂಡಿನ ಮಾರ್ಗದ ವಿಷಯಕ್ಕೆ.

ಒಂದು ಬಿಳೀ ಹಾಳಿಯ ಮೇಲೆ ಅದರ ಕೆಳಗಿನ ಅಂಚಿನ ಹತ್ತರ ಒಂದು ಬದಿಯಿಂದ ಮತ್ತೊಂದು ಬದಿಯ ವರೆಗೆ ಉದ್ದವಾಗಿ ಕೆಳಗಿನ ಅಂಚಿಗೆ ಸಮಾಂತರವಾಗಿ ಒಂದು ಗೆರೆಯನ್ನು ತೆಗೆಯಬೇಕು. ಅದರ ಮೇಲೆ ಕಾಗದದ ಎಡಬಾಜುವಿಗೆ (ಹುಡುಗನ ಬದಿಯಿಂದ) ಸುಮಾರು ಎರಡು ಇಂಚು ಅಂತರದ ಮೇಲೆ ಈ ಕೆಳಗಿನ ಗೆರೆಗೆ ಸಮಾಂತರವಾಗಿ ಒಂದು ಇಂಚು ಉದ್ದವಾದ ಒಂದು ಗೆರೆಯನ್ನು ತೆಗೆಯಬೇಕು. ಮುಂದೆ ಹುಡುಗನನ್ನು ಕುರಿತು ಕೆಳಗಿನಂತೆ ಅನ್ನಬೇಕು—

"ಈ ಉದ್ದ ಗೆರೆಯು ಒಂದು ಸಪಾಟಾದ ನೆಲ ಅದೆ ಮತ್ತು ಈ ಸಣ್ಣ ಗೆರೆಯು ಒಂದು ತೋಫು ಅದೆ; ಈ ತೋಫು ನೆಲಕ್ಕೆ ಸಮಾಂತರವಾಗಿ ಇಟ್ಟದೆ; ಮತ್ತು ಅದು ಈ ತೀರ ಸಪಾಟಾದ ನೆಲದ ಮೇಲಿಂದ ಹಾರಿಸಲ್ಪಟ್ಟದೆ ಎಂದು ತಿಳಿದುಕೊ."

"ಈಗ ಹೀಗೆ ತಿಳಿದುಕೊ. ಈ ತೋಫು ಹಾರಿಸಲ್ಪಟ್ಟಿತು ಮತ್ತು ಅದರ ಗುಂಡು ಈ ಸ್ಥಳದಲ್ಲಿ (ಭೂಮಿಯನ್ನು ತೋರಿಸುವ ಗೆರೆಯ ದೂರದ ತುದಿಯ ಕಡೆಗೆ ಸಣ್ಣ ಗುರುತು ಮಾಡಿ) ನೆಲಕ್ಕೆ ಬಡಿಯಿತು. ಈ ಪೇನಸಿಲು ತೆಗೆದುಕೊ ಮತ್ತು ಈ ಗುಂಡು ತೋಫಿನ ಬಾಯಿಯಿಂದ ಹೊರಟ ಮೇಲೆ ಈ ಸ್ಥಳದಲ್ಲಿ ನೆಲದ ಮೇಲೆ ಬಂದು ಬಡಿಯುವ ತನಕ ಯಾವ ಮಾರ್ಗದಿಂದ ಹೋಗಿರಬೇಕು, ತೋರಿಸು."

ಟರ್ಮನ್ನನು ಅಂದಪ್ರಕಾರ ಉತ್ತರಗಳನ್ನು ಕೆಳಗಿನಂತೆ ವರ್ಗೀಕರಿಸಬಹುದು—

(೧) ತೋಫಿನ ಬಾಯಿಯಿಂದ ಗುಂಡು ಬಡಿದ ಸ್ಥಳದ ವರೆಗೆ ಸರಳ ರೇಖೆಯು.

(೨) ತೋಫಿನ ಬಾಯಿಯಿಂದ ಭೂಮಿಗೆ ಸಮಾಂತರವಾಗಿ ಜಾದು ರೇಖೆಯನ್ನು ಗುಂಡು ನೆಲಕ್ಕೆ ಬಿದ್ದ ಸ್ಥಳದ ತೀರ ಮೇಲಿನ ತನಕ ತೆಗೆದು ಮುಂದೆ ಒಮ್ಮೆಲೆ ಕೆಳಗೆ ಇಳಿಸುವದು.

(೩) ತೋಫಿನ ಬಾಯಿಯಿಂದ ಮೊದಲು ಗುಂಡಿನ ಮಾರ್ಗವು ಸಮಾಂತರ ದಿಶೆಯನ್ನು ಬಿಟ್ಟು ಸಾವಕಾಶವಾಗಿ ಮೇಲೆ ಏರಿದಂತೆ ಮತ್ತು ಕಡೆಗೆ ದೀರ್ಘವರ್ತುಲಾಕಾರವಾಗಿ ನಿರ್ದಿಷ್ಟ ಸ್ಥಳಕ್ಕೆ ಹೋದಂತೆ ತೋರಿಸುವದು.

(೪) ಮಾರ್ಗವು ಮೊದಲು ಸ್ವಲ್ಪ ಅಂತರದ ವರೆಗೆ ಭೂಮಿಗೆ ಸಮಾಂತರವಾಗಿದ್ದು ಕಡೆಕಡೆಗೆ ಹೆಚ್ಚು ತೀವ್ರವಾಗಿ ಕೆಳಗೆ ಇಳಿದಂತೆ ತೋರಿಸುವದು.

ಇವುಗಳಲ್ಲಿ ಕಡೆಯ ಮಾದರಿಯ ಉತ್ತರ ಮಾತ್ರ ಸರಿಯೆಂದು ತಿಳಿಯಬೇಕು. ಮಾರ್ಗವು ಗಣಿತಶಾಸ್ತ್ರದ ಪ್ರಕಾರ ತೀರ ಸಮ ಇರುವದು ಅವಶ್ಯವಿಲ್ಲ.

(ಬ) ಮೀನಿನ ನೀರೊಳಗಿನ ತೂಕದ ಸಂಬಂಧವಾಗಿ.

ಹುಡುಗನನ್ನು ಕುರಿತು ಕೆಳಗಿನಂತೆ ಅನ್ನಬೇಕು—

"ನಿನಗೆ ಗೊತ್ತದೆ, ನೀರೊಳಗೆ ಇದ್ದಂಥ ಮೀನನ್ನು ಆ ನೀರು ಎತ್ತಿ ಹಿಡಿಯುತ್ತದೆ. ಹಾಗಾದರೆ, ಈ ಪ್ರಶ್ನೆ ಕೇಳಿಕೊ. ಹೀಗೆ ತಿಳಿದುಕೊ. ಒಂದು ಬಕೇಟು ನೀರಿನಿಂದ ಅರ್ಧ ತುಂಬಿದೆ. ನಾವು ಈ ಬಕೇಟನ್ನು ತಕ್ಕಡಿಯ ಒಂದು ಪರಡಿಯಲ್ಲಿ ಇಡುತ್ತೇವೆ ಮತ್ತು ಈ ನೀರು ಸಹಿತ ಈ ಬಕೇಟಿನ ತೂಕವು ೪೫ ಪೌಂಡು ಆಗುತ್ತದೆ. ಮುಂದೆ ನಾವು ಆ ನೀರಿನ ಬಕೇಟಿನೊಳಗೆ ೫ ಪೌಂಡು ತೂಕದ ಒಂದು ಮೀನು ಬಿಡುತ್ತೇವೆ. ಈಗ ಎಲ್ಲ ಕೂಡಿ ಎಷ್ಟು ತೂಕವಾಗುವದು?"

ಉತ್ತರವು ಸಮ ಇದ್ದರೂ ಮುಂದೆ ಕೆಳಗಿನಂತೆ ಕೇಳಬೇಕು—

"ನೀರು ಮೀನನ್ನು ಎತ್ತಿ ಹಿಡಿಯುತ್ತದೆ, ಅಹುದಲ್ಲ? ಅಂದ ಮೇಲೆ ನೀನು ಹೇಳುವದು ಹ್ಯಾಗೆ ಸಮ ಆದೀತು?"

ಉತ್ತರ ಸಮ ಆಗಬೇಕಾದರೆ ಹುಡುಗನ ಉತ್ತರದಲ್ಲಿ ಮುಂದಿನ ಸಂಗತಿಗಳು ಸೇರಿರಬೇಕು—(೧) ತೂಕವು ೫೦ ಪೌಂಡು ಆಗುತ್ತದೆ. (೨) ಎರಡನೇ ಪ್ರಶ್ನೆ ಕೇಳಿದರೂ ಹುಡುಗನು ಇದೇ ಉತ್ತರವನ್ನು ಘಟ್ಟಿ

ಹಿಡಿದಿರಬೇಕು. (೩) ಕೆಳಗಿನಂತೆ ಸಮ ಎನಿಸುವಂಥ ಯಾವದೇ ತರದಿಂದ ಉತ್ತರವನ್ನು ಹೇಳುವದು—"ಹ್ಯಾಗಿದ್ದರೂ ಅವುಗಳ ತೂಕ ಅಲ್ಲೇ ಇರುತ್ತದೆ—ನೀರೂ ಮೀನೂ ತಮ್ಮ ಭಾರವನ್ನು ತಕ್ಕಡಿಯ ಮೇಲೆಯೇ ಹಾಕುತ್ತವೆ."

(ಕ) ದೂರಿದ್ದ ವಸ್ತುವನ್ನು ಗುರಿ ಹೊಡೆಯುವ ಮರ್ಮವು.

ಹುಡುಗನನ್ನು ಕೆಳಗಿನಂತೆ ಕೇಳಬೇಕು—

"ಒಂದು ಬಂದೂಕು '೧೦೦ ಯಾರ್ಡಿನ ವರೆಗೆ ಹೋಗುತ್ತದೆ' ಹೀಗೆಂದರೆ, ಇದರ ಅರ್ಥವೇನು ನಿನಗೆ ಗೊತ್ತಿದೆಯಲ್ಲವೇ? ಇದರ ಅರ್ಥವು ಹೀಗೆ—ಆ ಬಂದೂಕಿನ ಗುಂಡು ಕೆಳಗೆ ಇಳಿಯುವದಕ್ಕಿಂತ ಮುಂಚೆ ಅದು ೧೦೦ ಯಾರ್ಡು ಹೋಗುತ್ತದೆ. ಅಂದರೆ ೧೦೦ ಯಾರ್ಡಿನ ತನಕ ಅದರ ಗುರಿಯು ಸರಿಯಾಗಿ ಹೋಗುತ್ತದೆ."

"ಈಗ ಹೀಗೆ ತಿಳಿದುಕೊ. ಒಬ್ಬ ಮನುಷ್ಯನು ಚಿಮಣಿ ಎಣ್ಣೆಯ ಡಬ್ಬಿಯಷ್ಟು ದೊಡ್ಡ ಗುರಿಯ ಕಡೆಗೆ ನೋಡಿ ಬಂದೂಕು ಹಾರಿಸುತ್ತಾನೆ. ಅವನ ಬಂದೂಕು ೧೦೦ ಯಾರ್ಡಿಗಿಂತ ಹೆಚ್ಚಿಗೆ ತಪ್ಪದೆ ಹೋಗುತ್ತದೆ. ಇಂಥ ಒಂದು ಬಂದೂಕಿನಿಂದ ೫೦ ಯಾರ್ಡು ದೂರವಿದ್ದಂಥ ಒಂದು ಪದಾರ್ಥಕ್ಕಿಂತ ೧೦೦ ಯಾರ್ಡು ದೂರವಿದ್ದಂಥ ಒಂದು ಪದಾರ್ಥದ ಕಡೆಗೆ ಗುರಿ ಹಿಡಿಯುವದು ಹೆಚ್ಚಿಗೆ ಕಠಿಣವಾದೀತೇನು?"

ಹುಡುಗನು "ಅಹುದು" ಎಂದು ಉತ್ತರ ಕೊಟ್ಟರೆ "ಅದು ಹೇಗೆ?" ಎಂದು ಕೇಳಬೇಕು. ಸರಿಯಾದ ಉತ್ತರವೆಂದರೆ, ಆರಂಭದಲ್ಲಿ ಗುರಿ ಬಿಟ್ಟ ಬಂದೂಕು ಸ್ವಲ್ಪ ಅಡ್ಡ ಆದರೆ ಮುಂದೆ ಹೋದ ಹೋದ ಹಾಗೆ ಗುಂಡು ಹೆಚ್ಚೆಚ್ಚು ಅಡ್ಡ ಹೋಗುವದು. ಈ ಅಡ್ಡ ಹಾದಿ ಮತ್ತು ಗುರಿಯ ಅಂತರ ಇವುಗಳೊಳಗಿನ ಗಣಿತಶಾಸ್ತ್ರದೃಷ್ಟಿಯಿಂದ ಸಂಬಂಧವನ್ನು ಹೇಳುವ ಅವಶ್ಯವಿಲ್ಲ. ಹುಡುಗನು ಸಾಧಾರಣವಾಗಿ ತತ್ತ್ವವನ್ನು ಹೇಳಿದರೂ ಸಾಕು. ಸಮವಾಗಿ ನಮಗೆ ಏನು ಬೇಕು ಎಂಬದನ್ನು ತಿಳಕೊಳ್ಳಲಿಕ್ಕೆ ಹುಡುಗನಿಗೆ ಸ್ವಲ್ಪ ಪ್ರಶ್ನೆಗಳನ್ನು ಕೇಳಬೇಕಾಗುವದು.

**ಪ್ರಶ್ನೆ ೨.**—ಎಂಟು ಅಂಕೆಗಳನ್ನು ತಿರುಗಿ ಅನ್ನುವದು (೩ರಲ್ಲಿ ೧. ಸೆಕಂಡಿಗೆ ಒಂದರಂತೆ ಓದಬೇಕು).

ಅಂಕೆಗಳನ್ನು ಒಂದೇ ವೇಗದಿಂದ ಅನ್ನಬೇಕು. ಹಾಡಿದ ಹಾಗೆ ಹೆಚ್ಚು ಕಡಿಮೆ ಆಘಾತ ಕೊಟ್ಟು ಓದಬಾರದು.

ಕೆಳಗಿನ ಅಂಕಮಾಲೆಗಳನ್ನು ಕೇಳಬೇಕು—

೭—೨—೫—೩—೪—೮—೯—೬ ; ೪—೯—೮—೫—೩—೭—೬—೨ ; ೮—೩—೭—೯—೫—೪—೨—೬.

**ಪ್ರಶ್ನೆ ೩.**—ಕೇಳಿಕೊಂಡ ಒಂದು ಪ್ಯಾರಾದೊಳಗಿನ ಭಾವಾರ್ಥವನ್ನು ಹೇಳುವದು (ಪ್ಯಾರಾವನ್ನು ಒಮ್ಮೆ ಮಾತ್ರ ಸುಮಾರು ಅರ್ಧ ಮಿನೀಟಿನೊಳಗೆ ಓದಬೇಕು).

ಹುಡುಗನನ್ನು ಕುರಿತು ಕೆಳಗಿನಂತೆ ಅನ್ನಬೇಕು—

"ನಾನು ಒಂದು ಪುಸ್ತಕದೊಳಗಿನ ಏಳು-ಎಂಟು ಪಂಕ್ತಿಯ ಸಣ್ಣ ಪ್ಯಾರಾವನ್ನು ಒಮ್ಮೆ ಮಾತ್ರ ಓದುತ್ತೇನೆ. ಸನ್ನದು ಆದ ಮೇಲೆ ನಿನಗೆ ನಾನು ಅದನ್ನು ನಿನಗೆ ಬಂದ ಹಾಗೆ ತಿರುಗಿ ಅನ್ನಲಿಕ್ಕೆ ಹೇಳುವೆನು. ನೀನು ಆ ಶಬ್ದಗಳನ್ನು ಸರಿಯಾಗಿ ಲಕ್ಷ್ಯದಲ್ಲಿ ಇಡಬೇಕೆಂದಲ್ಲ. ಆದರೆ ಅದರೊಳಗಿನ ವಿಷಯವನ್ನು ಆದಷ್ಟು ಸರಿಯಾಗಿ ಹೇಳಬೇಕಾದ್ದರಿಂದ ಲಕ್ಷ್ಯಗೊಟ್ಟು ಕೇಳು."

ಹುಡುಗನ ರಿಪೋರ್ಟನ್ನು ಶಬ್ದಶಃ ಬರಕೊಳ್ಳಬೇಕು.

ಹುಡುಗನ ಲಕ್ಷ್ಯವನ್ನು ಎಳಕೊಂಡು ಕೆಳಗಿನ ಪ್ಯಾರಾವನ್ನು ಸಾವಕಾಶವಾಗಿ, ಸುಬೋಧ್ಯವಾಗಿ ಮಹತ್ವದ ಶಬ್ದಗಳ ಮೇಲೆ ಆಘಾತವನ್ನು ಕೊಟ್ಟು ಸುಮಾರು ಅರ್ಧ ಮಿನೀಟಿನೊಳಗೆ ಓದಬೇಕು—

"ನಮ್ಮ ಜೀವನದ ವಿಷಯಕ್ಕೆ ಬೇರೆ ಬೇರೆ ಮತಗಳು ಅವೆ. ಕೆಲವರು ಇದು ಒಳ್ಳೆಯದದೆ ಎನ್ನುತ್ತಾರೆ. ಮತ್ತು ಬೇರೆ ಕೆಲವರು ಇದು ಕೆಟ್ಟದದೆ ಎನ್ನುತ್ತಾರೆ. ಇದು ಮಧ್ಯಮ ಪ್ರತಿಯದು ಅದೆ ಎಂದು ಸಾಧಾರಣವಾಗಿ ಅನ್ನಲಿಕ್ಕೆ ಅಡ್ಡಿ ಇಲ್ಲ. ಯಾಕಂದರೆ, ಒಂದು ರೀತಿಯಿಂದ ನಮ್ಮ ಸುಖವು ನಮಗೆ ಸಾಕಷ್ಟು ಇರುವದಿಲ್ಲ ಮತ್ತು ಬೇರೆ ರೀತಿಯಿಂದ ನೋಡಿದರೆ ನಮ್ಮ ಆಪತ್ತುಗಳು ನಮ್ಮ ಶತ್ರುಗಳು ಇಚ್ಛಿಸುವಷ್ಟು ಇರುವದಿಲ್ಲ. ನಮ್ಮ ಜೀವನದ ಈ ಮಧ್ಯಮಸ್ಥಿತಿಯಿಂದಲೇ ಅದು ತೀರ ಕೆಟ್ಟದು ಎಂದು ನಮಗೆ ಅನಿಸುವದಿಲ್ಲ."

ಹುಡುಗರು ಆದಷ್ಟು ತಮ್ಮ ಶಕ್ತ್ಯನುಸಾರ ಈ ಪ್ಯಾರಾದ ಸಾರವನ್ನು

ಹೇಳಲಿಕ್ಕೆ ತಪ್ಪುವದಿಲ್ಲ. ಆದರೂ ಅವರು ಯಾವದೇ ಕಾರಣದಿಂದ ನಡುವೆ ನಿಂತುಬಿಟ್ಟರೆ ಅವರಿಗೆ ನೆನಪಾಗುವಷ್ಟು ಬೇಕಾದ ಶಬ್ದಗಳಲ್ಲಿ ಹೇಳಲಿಕ್ಕೆ ಪ್ರೋತ್ಸಾಹವನ್ನು ಕೊಡಬೇಕು.

ಪ್ಯಾರಾದೊಳಗಿನ ಮಜಕೂರನ್ನು ಹುಡುಗರಿಗೆ ಆದಷ್ಟು ವಿವೇಕಾನು ಸಾರವಾಗಿ ಹೇಳಲಿಕ್ಕೆ ಬರಬೇಕು. ಅದರೊಳಗೆ ಕೆಳಗಿನ ಮೂರು ಸಂಗತಿ ಗಳು ಇರಲಿಕ್ಕೇ ಬೇಕು—(೧) ನಮ್ಮ ಜೀವನವು ಚಲೋದೂ ಇರುವದಿಲ್ಲ ಕೆಟ್ಟದೂ ಇರುವದಿಲ್ಲ (ಆದರೆ ಮಧ್ಯಮ ಪ್ರತಿಯದು ಇರುತ್ತದೆ); (೨) ಅದು (ಅಥವಾ ನಮ್ಮ ಸುಖವು) ನಾವು ಇಚ್ಛಿಸುವಷ್ಟು ಚಲೋದೂ (ಅಥವಾ ಹೆಚ್ಚೂ) ಇರುವದಿಲ್ಲ; ಅಥವಾ (೩) ನಮ್ಮ ಶತ್ರುಗಳು (ಅಥವಾ ಬೇರೆಯವರು) ಇಚ್ಛಿಸುವಷ್ಟು ಕೆಟ್ಟದೂ ಇರುವದಿಲ್ಲ.

ಹುಡುಗರ ಉತ್ತರಗಳು—

ಸಮ

(೧) ನಮ್ಮ ಜೀವನದಲ್ಲಿ ಕೆಲವು ಮತ ಅವೆ. ಕೆಲವರು ಚಲೋ ಕೆಲವರು ಕೆಟ್ಟ ಅನ್ನುತ್ತಾರೆ. ಸಾಧಾರಣವಾಗಿ ಮಧ್ಯಮ ಅನ್ನಲಿಕ್ಕೆ ಅಡ್ಡಿ ಇಲ್ಲ. ನಾವು ಇಚ್ಛಿಸುವಷ್ಟು ಸುಖ ಇಲ್ಲ. ವೈರಿಗಳು ಇಚ್ಛಿಸು ವಷ್ಟು ದುಃಖ ಇಲ್ಲ. ಆದ್ದರಿಂದ ಎರಡೂ ಮಧ್ಯಮ ಪ್ರತಿಯದು ಅನ್ನಲಿಕ್ಕೆ ಅಡ್ಡಿ ಇಲ್ಲ. (೨) ನಮ್ಮ ಜೀವನ ಕ್ರಮದಲ್ಲಿ ಬೇರೆ ಬೇರೆ ಮತಗಳು ಅವೆ. ಕೆಲವರು ಕೆಟ್ಟ ಅನ್ನುತ್ತಾರೆ, ಕೆಲವರು ಚಲೋ ಅನ್ನುತ್ತಾರೆ. ಆದರೆ ಇದು ಮಧ್ಯಮ ತರದ್ದು ಅನ್ನಲಿಕ್ಕೆ ಅಡ್ಡಿ ಇಲ್ಲ. ಯಾಕಂದರೆ, ನಮ್ಮ ಸುಖವು ಇಚ್ಛಿಸುವಷ್ಟು ಇರುವದಿಲ್ಲ. ಆಪತ್ತುಗಳು ಶತ್ರುಗಳು ಎಷ್ಟು ಬಯಿಸುತ್ತಾರೆ ಅಷ್ಟು ಇರುವದಿಲ್ಲ. (೩) ನಮ್ಮ ಜೀವನದಲ್ಲಿ ಬೇರೆ ಬೇರೆ ತತ್ತ್ವಗಳು ಅವೆ. ಕೆಲವರು ಒಳ್ಳೆಯದದೆ ಕೆಲವರು ಕೆಟ್ಟದದೆ ಅನ್ನುತ್ತಾರೆ. ಆದರೆ ಅದು ಮಧ್ಯಮ ಅದೆ ಅನ್ನಲಿಕ್ಕೆ ಅಡ್ಡಿ ಇಲ್ಲ. ಯಾಕಂದರೆ, ನಮಗೆ ಬೇಕಾಗುವಷ್ಟು ಸುಖವು ಇಲ್ಲ ಮತ್ತು ಆಪತ್ತುಗಳು ವೈರಿಗಳು ಇಚ್ಛಿಸು ವಷ್ಟು ಇಲ್ಲ. ಆದ್ದರಿಂದ ಅದು ಮಧ್ಯಮ ಸ್ಥಿತಿಯಲ್ಲಿ ಅದೆ ಅನ್ನಲಿಕ್ಕೆ ಅಡ್ಡಿ ಇಲ್ಲ. (೪) ನಮ್ಮ ಜೀವನದಲ್ಲಿ ಬೇರೆ ಬೇರೆ ತರಗಳು ಆಗಿರುತ್ತವೆ. ಇದು ಕೆಲವರು ಚಲೋ ಅನ್ನುತ್ತಾರೆ, ಕೆಲವರು ಕೆಟ್ಟ ಅನ್ನುತ್ತಾರೆ. ಸುಖಗಳು ಸಾಕಷ್ಟು ಇರುವದಿಲ್ಲ, ಕೆಟ್ಟ ಶತ್ರುಗಳು ಬಯಸುವಷ್ಟು ಇರು

ವದಿಲ್ಲ. ಆದ್ದರಿಂದ ಇದು ಮಧ್ಯಮ ಸ್ಥಿತಿಯದು ಅನ್ನಲಿಕ್ಕೆ ಅಡ್ಡಿ ಇಲ್ಲ. (೫) ನಮ್ಮ ಜೀವನದ ಬಗ್ಗೆ ಮತಗಳು ಅವೆ. ಇದು ಚಲೋ ಎಂದು ತುಸು ಮಂದಿ ಅನ್ನುತ್ತಾರೆ, ಕೆಟ್ಟ ಎಂದು ಕೆಲವರು ಅನ್ನುತ್ತಾರೆ. ಆದರೆ ಇದು ಮಧ್ಯಮ ತರದ್ದು. ಯಾಕಂದರೆ, ನಮಗೆ ಬೇಕಾಗುವಷ್ಟು ಸುಖವೂ ಸಿಗುವದಿಲ್ಲ; ಆಪತ್ತುಗಳು ಶತ್ರುಗಳು ಬಯಸುವಷ್ಟು ಇರುವದಿಲ್ಲ. ಆದ್ದರಿಂದ ಮಧ್ಯಮ ಸ್ಥಿತಿಯದು ಅನ್ನಲಿಕ್ಕೆ ಅಡ್ಡಿ ಇಲ್ಲ.

### ತಪ್ಪು

(೧) ನಮ್ಮ ಜೀವನದ ಸಲುವಾಗಿ ಕೆಲವು ಮಂದಿಯ ಮತ ಚಲೋ ಅದೆ. ನಮಗೆ ಕಷ್ಟ ಬಹಳ ಅವೆ. ಅದಕ್ಕೆ ಕೆಲವರು ಬಯಸುವಷ್ಟು ಇರುವುದಿಲ್ಲ. ಶತ್ರುಗಳಿಗಿಂತ ಹೆಚ್ಚು ಅವೆ. (೨) ನಮಗೆ ಜೀವನದಲ್ಲಿ ಆಪತ್ತುಗಳು ಬಹಳ ಬರುತ್ತವೆ. ಆಪತ್ತುಗಳು ಮನುಷ್ಯನಿಗೆ ಬೇಕು. ಯಾಕಂದರೆ, ಅವು ಪಾಠ ಕಲಿಸುತ್ತವೆ. (೩) ನಮ್ಮ ಜೀವ ಚಲೋ ಅದೆ ಎಂತ ಕೆಲವರು ಅನ್ನುತ್ತಾರೆ. ಆದರೆ ನಾವು ಬಹಳ ಕಷ್ಟವನ್ನು ಅನುಭವಿಸಬೇಕಾದ್ದರಿಂದ ಅದು ಕೆಟ್ಟ ಅಂತಾ ಅನ್ನುತ್ತೇವೆ. (೪) ನಮ್ಮ ಜೀವನದ ಮತಗಳು ಬೇರೆ ಬೇರೆ ಇರುತ್ತವೆ. ಕೆಲವು ಮತಗಳಿಂದ ಚಲೋ ಆಗುತ್ತದೆ. ಕೆಲವುಗಳಿಂದ ಕೆಟ್ಟ ಆಗುತ್ತದೆ. ಎಲ್ಲ ಚಲೋ ಇರುವದಿಲ್ಲ. ಕೆಲವು ಮತಗಳಿಂದ ಕೆಟ್ಟ ಆಗುತ್ತದೆ. ಕೆಲವುಗಳಿಂದ ಒಳ್ಳೇದು ಆಗುತ್ತದೆ. (೫) ನಮ್ಮ ಜೀವನದಲ್ಲಿ ಕೆಲವರ ಮತಗಳು ಬೇರೆ ಬೇರೆ ಇರುತ್ತವೆ. ಕೆಲವರು ಕೆಟ್ಟ ಅನ್ನುತ್ತಾರೆ. ಕೆಲವರು ಚಲೋ ಅನ್ನುತ್ತಾರೆ. ಇದರ ಮೇಲೆ ಅವಲಂಬಿಸಿರಲಿಕ್ಕೆ ಬರುವದಿಲ್ಲ. ಆಪತ್ತಿನಲ್ಲಿ ಶತ್ರುಗಳು ಕೆಡಕು ಮಾಡುತ್ತಾರೆ ಎಂತ ಅನ್ನಲಿಕ್ಕೆ ಬರುವದಿಲ್ಲ. (೬) ಈ ಜಗತ್ತಿನಲ್ಲಿ ನಮ್ಮ ಜೀವನದ ಬೇರೆ ಬೇರೆ ಮತಗಳು ಉಂಟು. ಕೆಲವರು ಕೆಟ್ಟ, ಕೆಲವರು ಸಾಧಾರಣ ಅನ್ನುತ್ತಾರೆ. ಆದರೆ ಮಧ್ಯಮ ಸ್ಥಿತಿಯದು ಅನ್ನಲಿಕ್ಕೆ ಅಡ್ಡಿ ಇಲ್ಲ. ನಮಗೆ ತೀರ ಸುಖ ಇರುವದಿಲ್ಲ. (೭) ನಮ್ಮ ಜೀವನವು ತೀರ ಕೆಟ್ಟದು ಅಂತ ಅನ್ನಲಿಕ್ಕೆ ಬರುವ ಹಾಗೆ ಇಲ್ಲ. ಯಾಕಂದರೆ, ಕೋಪ, ಸ್ವಾರ್ಥ ಮುಂತಾದ ಗುಣಗಳು ನಮ್ಮಲ್ಲಿ ಇರುವದರಿಂದ ನಾವು ಉತ್ತಮ ಸ್ಥಿತಿಯ ಜೀವನಗಳು ಆಗಿರುವದಿಲ್ಲ. (೮) ನಮ್ಮ ಜೀವನವು ಉತ್ತಮ

ಎಂದು ಕೆಲವರು ಹೇಳುತ್ತಾರೆ. ಕೆಟ್ಟದೆಂದು ಕೆಲವರು ಹೇಳುತ್ತಾರೆ. ಆದರೆ ಕೆಟ್ಟದೆಂದರೆ, ನಮ್ಮ ಶತ್ರುಗಳು ಇಚ್ಛಿಸುವಷ್ಟು ನಮಗೆ ದುಃಖಗಳು ಇರುವದಿಲ್ಲ. (೯) ಜೀವನದಲ್ಲಿ ಎಷ್ಟೋ ಭೇದಗಳು ಇರುತ್ತವೆ. ಎಷ್ಟೋ ಮಂದಿ ಕೆಟ್ಟ ಅನ್ನುತ್ತಾರೆ. ಆದರೆ ಮಧ್ಯಮ ಸ್ಥಿತಿ ನಮಗೆ ಚಲೋ ಅನಿಸುತ್ತದೆ. ಇದರೊಳಗೆ ಅಷ್ಟು ಸುಖವೂ ಇರುವದಿಲ್ಲ ಅಷ್ಟು ದುಃಖವೂ ಇರುವದಿಲ್ಲ. ಆದ್ದರಿಂದ ಮಧ್ಯಮ ಸ್ಥಿತಿಯಲ್ಲಿ ಇರುವದು ಚಲೋ ನಮಗೆ ಅನಿಸುತ್ತದೆ. (೧೦) ನಮ್ಮ ಜೀವನದ ಬೇರೆ ಬೇರೆ ಮತಗಳು ಉಂಟು. ಕೆಲವರು ಒಳ್ಳೇದು ಅನ್ನುತ್ತಾರೆ. ಕೆಲವರು ಕೆಟ್ಟದು ಅನ್ನುತ್ತಾರೆ. ಆದರೆ ಇದು ಮಧ್ಯಮ ಇರುತ್ತದೆ ಅನ್ನಲಿಕ್ಕೆ ಆಗುವದು. ಕೆಲವು ಕಡೆಯಿಂದ ನಮಗೆ ಒಳ್ಳೇದು ಆಗುತ್ತದೆ. ಕೆಲವು ಕಡೆಯಿಂದ ಕೆಟ್ಟದು ಆಗುತ್ತದೆ. (೧೧) ನಮ್ಮ ಜೀವನವು ಕೆಲವರು ಚಲೋ ಅನ್ನುತ್ತಾರೆ. ಕೆಲವರು ಕೆಟ್ಟ ಅನ್ನುತ್ತಾರೆ. ಇದು ಸಾಧಾರಣವಾಗಿ ಮಧ್ಯಮ ಪ್ರತಿಯದು ಇರುವದರಿಂದ ಕೆಟ್ಟವೆನಿಸುವದು. (೧೨) ನಮ್ಮ ಜೀವವು ಬೇರೆ ಬೇರೆ ತರದ್ದು ಇರುತ್ತದೆ. ಕೆಲವರು ಚಲೋದು ಅನ್ನುತ್ತಾರೆ. ಕೆಲವರು ಕೆಟ್ಟದು ಅನ್ನುತ್ತಾರೆ. ನಾವು ಅದನ್ನು ಮಧ್ಯಮತರದ್ದು ಎಂದು ಅನ್ನಬಹುದು. (೧೩) ನಮ್ಮ ಜೀವನದ ಬಗ್ಗೆ ಚಲೋ ಎಂದು ಕೆಲವರು ಅನ್ನುತ್ತಾರೆ. ಕೆಲವರು ಕೆಟ್ಟ ಅದೆ ಅನ್ನುತ್ತಾರೆ. ಆದರೆ ಇದು ಮಧ್ಯಮ ಸ್ಥಿತಿಯಲ್ಲಿ ಅದೆ ಅನ್ನಲಿಕ್ಕೆ ಅಡ್ಡಿ ಇಲ್ಲ. ಯಾಕಂದರೆ, ಒಂದು ವೇಳೆ ಇದು ಆಪತ್ತಿನಲ್ಲಿ ಇರಬಹುದು. ಒಂದು ವೇಳೆ ಶತ್ರುವಿನಕ್ಕಿಂತಲೂ ಹೆಚ್ಚು ಇರಬಹುದು. ಆದರೆ ಇದು ಮಧ್ಯಮ ಸ್ಥಿತಿಯಲ್ಲಿ ಅದೆ ಅನ್ನುತ್ತಾರೆ.

**ಪ್ರಶ್ನೆ ೪.**—ತ್ರಿಕೋಣವನ್ನು ಕಲ್ಪನೆಯಿಂದ ತಿರುವು ಮುರುವು ಮಾಡುವದು—ಜೀನೇನ ಸಮೂನೆ (ಆಕೃತಿಯನ್ನು ಸಂಪೂರ್ಣವಾಗಿ ತೆಗೆಯಲಿಕ್ಕೆ ೨ ಮಿನೀಟುಗಳು).

(ಪ್ರಶ್ನೆಯನ್ನು ಕೇಳುವ ಪದ್ಧತಿಯು ವರ್ಷ ೧೯, ಪ್ರಶ್ನೆ ೬ರ ಹಾಗೆಯೇ.)

ವರ್ಷ ೧೯, ಪ್ರಶ್ನೆ ೬ರಲ್ಲಿ ಹೇಳಿದ ಹಾಗೆ ಕತ್ತರಿಸಿದ ಚೌಕನ್ನು ಹುಡುಗನ ಎದುರಿಗೆ ಇಟ್ಟು ಕೆಳಗಿನಂತೆ ಅನ್ನಬೇಕು—

"ಈ ಕಾರ್ಡಿನ ಕೆಳಗಿನ ತುಂಡಿನ ಕಡೆಗೆ ಲಕ್ಷ್ಯಗೊಟ್ಟು ನೋಡು. ಈಗ ಹೀಗೆ ತಿಳಿದುಕೊ. ನಾನು ಈ ಕೆಳಗಿನ ತುಂಡನ್ನು ಎತ್ತಿ ಹೀಗೆ ತಿರುಗಿಸಿ ಇಡುತ್ತೇನೆ. ಹೇಗೆಂದರೆ—ಈ ಭುಜವು (**ಅ ಕ** ಭುಜದ ಕಡೆಗೆ, ಕಾರ್ಡನ್ನು ತಿರುಗಿಸದೆ, ಬೆರಳು ಮಾಡಿ) ಈ ಭುಜಕ್ಕೆ ಹಚ್ಚಿ (**ಅ ಬ** ಭುಜದ ಕಡೆಗೆ ಬೆರಳು ಮಾಡಿ) ಇಡುತ್ತೇನೆ. ಮತ್ತು ಈ ಮೂಲೆಯನ್ನು (**ಕ**ದ ಕಡೆಗೆ ಬೆರಳು ಮಾಡಿ) ಈ ಮೂಲೆಗೆ ಹೊಂದಿಸಿ (**ಬ**ದ ಕಡೆಗೆ ಬೆರಳು ತೋರಿಸಿ) ಇಡುತ್ತೇನೆ. ಹಾಗಾದರೆ, ಈಗ ಇದೆಲ್ಲ ಆಕೃತಿಯು ಹ್ಯಾಗೆ ಕಾಣುವದು ? ಈಗ ನಾನು ಕೆಳಗಿನ ತುಂಡನ್ನು ಬದಿಗೆ ತೆಗೆದಿಡುತ್ತೇನೆ (ಕೆಳಗಿನ ತುಂಡನ್ನು ಬದಿಗೆ ಇಡಬೇಕು). ನಾನು ಹೇಳಿದ ಹಾಗೆ ಈ ತುಂಡು ಇಟ್ಟದೆ ಎಂದು ತಿಳಿ. ಅದರ ಆಕೃತಿಯನ್ನು ಸರಿಯಾಗಿ ತೆಗೆದು ತೋರಿಸು. ಮೇಲಿನ ತ್ರಿಕೋಣದ ಆಕೃತಿಯನ್ನು ಮೊದಲು ತೆಗೆದು ಆರಂಭಮಾಡು."

ಹುಡುಗನು ತೆಗೆದ ಆಕೃತಿಯು ಕೆಳಗೆ ತೋರಿಸಿದಂತೆ ಇರಬೇಕು—




ಆಕೃತಿಗೆ ಗುಣಗಳನ್ನು ಕೊಡುವಾಗ ಮುಂದಿನ ಸಂಗತಿಗಳನ್ನು ಲಕ್ಷ್ಯದಲ್ಲಿ ಇಡಬೇಕು—(೧) **ಅ′ ಕ′ ಬ′** ಕೋಣವು ಸರ್ವಸಾಧಾರಣವಾಗಿ ಕಾಟಕೋಣವಾಗಿರಬೇಕು ; (೨) **ಅ′ ಕ′** ಭುಜವು **ಅ ಬ**ಕ್ಕಿಂತ ಸಣ್ಣದಿರಬೇಕು ; (೩) **ಬ′ ಕ′** ಭುಜವು ಮೂರೂ ಭುಜಗಳಲ್ಲಿ ಸಣ್ಣದಿರಬೇಕು.

**ಪ್ರಶ್ನೆ ೫.**—ಏಳು ಅಂಕೆಗಳನ್ನು ತಿರುವು ಮುರುವು ಅನ್ನುವದು (೩ರಲ್ಲಿ ೧. ಸೆಕಂಡಿಗೆ ಒಂದರಂತೆ ಓದಬೇಕು).

ಈ ವರ್ಷದ ಅಂಕಮಾಲೆಗಳು—

೪—೧—೬—೨—೫—೯—೩; ೩—೮—೨—೬—೪—೭—೫; ೯—೪—೫—೨—೮—೩—೭.

(ಹಿಂದಿನ ವರ್ಷಗಳಲ್ಲಿಯ ತಿರುವು ಮುರುವು ಅಂಕೆಗಳನ್ನು ಅನ್ನುವ ಪ್ರಶ್ನೆಗಳಂತೆ.)

**ಪ್ರಶ್ನೆ ೬.**—ಅನಿಯಂತ್ರಿತ ಸಂಯೋಜನೆಯು (೩ ಮಿನೀಟಿನಲ್ಲಿ ೮೦ ಶಬ್ದಗಳನ್ನು ಹೇಳುವದು).

(ವರ್ಷ ೯, ಪ್ರಶ್ನೆ ೬ರಂತೆ.)

**ವೈಕಲ್ಪಿಕ ಪ್ರಶ್ನೆ.**—ಶಬ್ದಕೋಶ—೬೦ ಶಬ್ದಗಳು (ಒಟ್ಟು ಶಬ್ದಕೋಶದ ೨೮,೦೦೦ ಶಬ್ದಗಳಲ್ಲಿ ೧೬,೮೦೦ ಶಬ್ದಗಳು).

(ಹಿಂದಿನ ವರ್ಷಗಳ ಶಬ್ದಕೋಶದ ಪ್ರಶ್ನೆಗಳಂತೆ.)

ಈ ಪುಸ್ತಕದ ಮರಾಠಿ ಆವೃತ್ತಿಯೂ ಸಿದ್ಧವಾಗಿದೆ.

ಬೆಲೆ, ರೂ. ೧ ೦ ೦

ಪುಸ್ತಕದಲ್ಲಿ ಬೇರೆ ಬೇರೆ ಕಡೆಗೆ ಹೇಳಿದಂತೆ, ಕನ್ನಡ ಮತ್ತು ಮರಾಠಿ ಆವೃತ್ತಿಗಳೊಂದಿಗೆ ಉಪಯೋಗಿಸತಕ್ಕ ಕಾರ್ಡುಗಳೂ ಸಿದ್ಧವಾಗಿವೆ.

ಒಂದು ಸೆಟ್ಟಿಗೆ ಬೆಲೆ, ರೂ. ೧ ೦ ೦

ಬಾಲಕರು ಕೊಟ್ಟ ಉತ್ತರಗಳನ್ನು ಬರೆದುಕೊಳ್ಳುವ ಬರಿದಾದ ಫಾರ್ಮುಗಳೂ ಸಿದ್ಧವಾಗಿವೆ.

೫೦ ಫಾರ್ಮಿನ ಪಾಕೀಟಿಗೆ ಬೆಲೆ, ಆಣೆ ೦ ೮ ೦

## ಒಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್